# ಹಿಂಡಿನ ನಾಯಕಿಯರ ಕೈಪಿಡಿ

## (A COMPLETE HAND BOOK FOR FLOCK LEADERS)




THE BHARAT SCOUTS & GUIDES, KARNATAKA

STATE HEAD QUARTERS

SHANTHI GRUHA, NO : 39, NEXT TO MAHARANI'S COLLEGE

PALACE ROAD, BENGALURU - 560 001

PH.: 080-22260017, 22267470, FAX.: 080-22261047

email: info@bsgkarnataka.org

## 10 GOLDEN POINTS
## BASED ON THE BULBUL LAW

1. A Bulbul is always loyal to her elders and obey their order with smile.
2. A Bulbul loves to move in flock and they believe in group learning.
3. A Bulbul does a good turn everyday.
4. A Bulbul moves freely in the natural environment and learn valuable things from the nature.
5. A Bulbul is fond of clean and tidy places.
6. A Bulbul likes to keep her body and belongings clean and tidy.
7. A Bulbul is courteous in action and behaviour.
8. A Bulbul loves to shoulder responsibilities assigned to them from time to time.
9. A Bulbul enjoys her work in play-way method through "make believes" stories and action songs.
10. A Bulbul aims to become good and useful citizen in future.

## BulBul Prayer Song

Hum Hain Chhote Chhote bal
Hamari Lena Tu Sambhal,
Kadam Kadam par Kare Galatiyan
Sad Budhi Dena Bhula Galathiayan
Tum bin Kaun Lega Sambal
Ham Hai Chhote Chhote Bal
Hamari Lena Tu Sambhal.

# ಹಿಂಡಿನ ನಾಯಕಿಯರ ಕೈಪಿಡಿ

## HAND BOOK FOR FLOCK LEADERS

ಮೂಲ :

**A Complete Handbook for Flock Leaders**

ಪ್ರಕಟಣೆ :

**ಕೇಂದ್ರ ಕಛೇರಿ, ನವದೆಹಲಿ**

**ಹಿಂಡಿನ ನಾಯಕಿಯರ ತರಬೇತಿ ರಾಜ್ಯ ಸಂಸ್ಥೆ, ಬೆಂಗಳೂರು**

ಭಾಷಾಂತರ : ದಿ|| ಎಸ್.ಕೆ. ಪ್ರಭಾ, LT(G)

ಪರಿಶೀಲನೆ : ಬಿ. ರೇವತಿ, LT(B)



**ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ**
ಶಾಂತಿಗೃಹ, ನಂ. 39, ಅರಮನೆ ರಸ್ತೆ, ಬೆಂಗಳೂರು-560 001.
E-mail : info@bsgkarnataka.org

**ಹಿಂಡಿನ ನಾಯಕಿಯರ ಕೈಪಿಡಿ**



ಪ್ರಕಾಶಕರು:

**ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ**
ರಾಜ್ಯ ಕೇಂದ್ರ ಕಾರ್ಯಾಲಯ
ಶಾಂತಿಗೃಹ, ನಂ. 39, ಅರಮನೆ ರಸ್ತೆ
ಬೆಂಗಳೂರು-560 001.



ಪ್ರಥಮ ಮುದ್ರಣ : 2018
ಪ್ರಥಮ ಮುದ್ರಣ : 2024

ಪುಟಗಳು : **x + 128 = 138**

ಬೆಲೆ : **₹ 40/-**

ಮುದ್ರಕರು:
**ಸತ್ಯಶ್ರೀ ಪ್ರಿಂಟರ್ಸ್ ಪ್ರೈ. ಲಿ.,**
ಬೆಂಗಳೂರು-560 026. ದೂ: 080-26748811
E-mail: satyasriprn@gmail.com

# ರಾಜ್ಯ ಮುಖ್ಯ ಆಯುಕ್ತರ ನುಡಿ

ರಾಷ್ಟ್ರೀಯ ಕಛೇರಿ, ನವದೆಹಲಿಯವರು ಪ್ರಕಟಿಸಿದ **"A Complete Hand Book for Flock Leaders"** ಪುಸ್ತಕವನ್ನು ಕನ್ನಡಕ್ಕೆ ಭಾಷಾಂತರಿಸಿ, 2018ರಲ್ಲಿ ಮುದ್ರಿಸಿದ "ಹಿಂಡಿನ ನಾಯಕಿಯರ ಕೈಪಿಡಿ"ಯನ್ನು ಈಗ ಮರುಮುದ್ರಣ ಮಾಡಲಾಗುತ್ತಿದೆ. ಈ ಪುಸ್ತಕವನ್ನು ಮೊಟ್ಟಮೊದಲಿಗೆ ಮುದ್ರಿಸಲು ಶ್ರಮಿಸಿದ ದಿ॥ ಎಸ್.ಕೆ. ಪ್ರಭ, ಎಲ್.ಟಿ.(ಗೈ), ಜಂಟಿ ಕಾರ್ಯದರ್ಶಿ, ದಿ॥ ಎನ್.ಕೆ. ಛಾಯಾ, ಎಲ್.ಟಿ.(ಗೈ), ಕೇಂದ್ರ ಸ್ಥಾನಿಕ ಆಯುಕ್ತರು (ಗೈಡ್ಸ್) ಅವರನ್ನು ಮತ್ತು ಪರಿಶೀಲಿಸಿದ ಶ್ರೀಮತಿ ಬಿ. ರೇವತಿ, ಎಲ್.ಟಿ.(ಬುಲ್‌ಬುಲ್) ಅವರನ್ನೂ ಇಲ್ಲಿ ಸ್ಮರಿಸುತ್ತೇನೆ.

ಈ ಎರಡನೇ ಮುದ್ರಣ ಹೊರಬರಲು ಪರಿಷ್ಕರಿಸಿ ಶ್ರಮಿಸಿದ ಶ್ರೀಮತಿ ಬಿ.ಡಿ. ಶಾಂತ, ಎಲ್.ಟಿ.(ಗೈ), ದಿ॥ ಕಮಲಾಕ್ಷಿ ಹೆಗಡೆ, ಹೆಚ್.ಡಬ್ಲ್ಯೂ.ಬಿ.(ಗೈ), ಸಹಾಯಕ ಜಿಲ್ಲಾ ಆಯುಕ್ತರು, ಬೆಂಗಳೂರು ಉತ್ತರ ಜಿಲ್ಲೆ ಮತ್ತು ಶ್ರೀಮತಿ ಬಿ.ವಿ. ರಾಮಲತಾ, ಎಲ್.ಟಿ(ಆರ್), ರಾಜ್ಯ ಆಯುಕ್ತರು (ಗೈಡ್ಸ್), ವಯಸ್ಕ ಸಂಪನ್ಮೂಲ ಅವರಿಗೂ, ಅವರಿಗೆ ಸಹಕಾರ ನೀಡಿದ ಶ್ರೀಮತಿ ಗೀತಾನಟರಾಜ್, ರಾಜ್ಯ ಆಯುಕ್ತರು (ಗೈಡ್ಸ್), ಎಲ್.ಟಿ(ಗೈ), ಶ್ರೀಮತಿ ಮಂಜುಳ ಸಿ., ರಾಜ್ಯ ಸಂಘಟನಾ ಆಯುಕ್ತರು (ಗೈಡ್ಸ್), ಎಲ್.ಟಿ.(ಗೈ) ಮತ್ತು ಶ್ರೀಮತಿ ಕೆ.ವಿ. ಶಾಮಲ, ರಾಜ್ಯ ತರಬೇತಿ ಆಯುಕ್ತರು (ಗೈಡ್ಸ್), ಎಲ್.ಟಿ.(ಗೈ) ಶ್ರೀಮತಿ ಕುಮಾರಿ ಹೊನ್ನಮ್ಮ, ಸಹಾಯಕ ರಾಜ್ಯ ಸಂಘಟನಾ ಆಯುಕ್ತರು (ಗೈ) ಇವರುಗಳಿಗೆ ರಾಜ್ಯ ಸಂಸ್ಥೆಯ ಪರವಾಗಿ ಧನ್ಯವಾದಗಳನ್ನು ಅರ್ಪಿಸುತ್ತೇನೆ.

**ಪಿ.ಜಿ.ಆರ್. ಸಿಂಧ್ಯ**
ರಾಜ್ಯ ಮುಖ್ಯ ಆಯುಕ್ತರು

# ಆಶಯ ನುಡಿ

ಇದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ಕೇಂದ್ರ ಕಾರ್ಯಾಲಯದ "Hand Book for Flock Leaders" ಪುಸ್ತಿಕೆಯ ಕನ್ನಡಾನುವಾದ. ಇದನ್ನು ರಾಜ್ಯ ಸಂಸ್ಥೆಯ ಜಂಟಿ ಕಾರ್ಯದರ್ಶಿಗಳಾಗಿದ್ದ ದಿ॥ ಎಸ್.ಕೆ. ಪ್ರಭಾ ಅವರು ಅನುವಾದಿಸಿದ್ದರು. ನಂತರ ಆ ಅನುವಾದವನ್ನು ಪರಿಷ್ಕರಿಸಿ, ಅಂತಿಮ ರೂಪು ಕೊಡುವಲ್ಲಿ ಗೈಡ್ ವಿಭಾಗದ ರಾಜ್ಯ ಆಯುಕ್ತರಾದ ಶ್ರೀಮತಿ ಗೀತಾ ನಟರಾಜ್ ಮತ್ತು ತರಬೇತಿ ನಾಯಕರುಗಳಾದ ದಿ॥ ಎನ್.ಕೆ. ಛಾಯಾ, ಬಿ. ರೇವವತಿ ಎಲ್.ಟಿ.(ಗೈಡ್ಸ್) ಶ್ರೀಮತಿ ಬಿ.ಡಿ. ಶಾಂತ, ಸಿ. ಮಂಜುಳಾ, ಕೆ.ವಿ. ಶಾಮಲಾ ಮೊದಲಾದ ಕ್ಷೇತ್ರತಜ್ಞರು ಶ್ರಮವಹಿಸಿದ್ದಾರೆ.

ಈ ಕೃತಿಯಲ್ಲಿ ಸ್ಕೌಟ್ ಮತ್ತು ಗೈಡ್ ಚಳವಳಿಯ ಸ್ವರೂಪ ವನ್ನು ಸ್ಥೂಲವಾಗಿ ತಿಳಿಸಿ, ಬುಲ್‌ಬುಲ್ ವಿಭಾಗದ ಹುಟ್ಟು, ಬೆಳವಣಿಗೆ, ಹಿಂಡಿನ ವೈಶಿಷ್ಟ್ಯಗಳು, ಪೋಷಕರು ಮತ್ತು ಸಾರ್ವಜನಿಕರ ಸಹಕಾರ ಇತ್ಯಾದಿ ವಿಷಯಗಳಿಗೆ ಸಂಬಂಧಿಸಿದ ವಿವರಗಳನ್ನು ಮೊದಲ ಭಾಗದಲ್ಲಿ ನೀಡಲಾಗಿದೆ. ಎರಡನೆಯ ಭಾಗದಲ್ಲಿ ಪ್ರವೇಶ್ ಪರೀಕ್ಷೆಯಿಂದ ಹಿಡಿದು 'ಬಂಗಾರದ ಬಾಣ'ದವರೆಗೆ ವಿವಿಧ ಪದಕಗಳನ್ನು ಗಳಿಸಲು ಸಾಧಿಸಬೇಕಾದ ಅರ್ಹತೆಗಳನ್ನು ತಿಳಿಸಲಾಗಿದೆ.

ಗೈಡ್ ಮಕ್ಕಳಲ್ಲಿ ಅಂತಹ ಅರ್ಹತೆ ಉಂಟುಮಾಡುವುದು ಆಯಾ ಗುಂಪಿನ ಅಥವಾ ಹಿಂಡಿನ ನಾಯಕರ ಕೆಲಸ. ಆ ಕೆಲಸಕ್ಕೆ ಈ ಕೈಪಿಡಿಯು ನೆರವಾಗುತ್ತದೆ. ತರಬೇತಿ ಅಥವಾ ಮಾರ್ಗದರ್ಶನ ನೀಡುವವರು ಪೂರ್ಣ ಸಜ್ಜಾಗಿದ್ದರೆ ಒಳ್ಳೆಯ ಫಲ ದೊರಕುವಲ್ಲಿ ಸಂಶಯವಿಲ್ಲ. ಕ್ಷೇತ್ರಾನುಭವದ ಆಧಾರದ ಮೇಲೆ ರಚಿಸಲಾಗಿರುವ ಈ ಕೈಪಿಡಿಯ ಉಪಯುಕ್ತತೆಯನ್ನು ಅರ್ಥಮಾಡಿಕೊಂಡು, ಮಕ್ಕಳಲ್ಲಿ ಅರ್ಹತೆಯ ಆತ್ಮವಿಶ್ವಾಸ ಮೂಡಿಸುವ ಕೆಲಸವಾಗಲಿ ಎಂದು ಆಶಿಸುತ್ತೇನೆ.

ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಗೆ ಸಂಬಂಧಿಸಿದಂತೆ ಶೈಕ್ಷಣಿಕ ಮೌಲ್ಯದ ಸಾಹಿತ್ಯ ಪ್ರಕಟಣೆಯ ಬಗೆಗೆ ವಿಶೇಷ ಆಸಕ್ತಿ ವಹಿಸಿ, ಪ್ರಕಟಣಾ ಸಮಿತಿಗೆ ಎಲ್ಲ ರೀತಿಯ ಬೆಂಬಲ ನೀಡುತ್ತಿರುವ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯ ಅವರಿಗೂ, ಉಪಯುಕ್ತ ಸಲಹೆ-ಸೂಚನೆಗಳನ್ನಿತ್ತು ಸಹಕರಿಸಿದ ಪ್ರಕಟಣಾ ಸಮಿತಿಯ ಎಲ್ಲ ಸದಸ್ಯರಿಗೂ ನನ್ನ ವಂದನೆಗಳು.

ಈಗ ಮರುಮುದ್ರಣವಾಗುತ್ತಿರುವ ಈ ಪುಸ್ತಕವನ್ನು ರಾಷ್ಟ್ರೀಯ ಸಂಸ್ಥೆಯವರು ಮಾಡಿರುವ ಬದಲಾವಣೆಗಳನ್ನೂ ಪರಿಶೀಲಿಸಿ, ಇನ್ನೂ ಹಲವು ವಿವರಗಳನ್ನು ನೀಡುವ ನಿಟ್ಟಿನಲ್ಲಿ ಶ್ರೀಮತಿ ಬಿ.ಡಿ. ಶಾಂತ, ಶ್ರೀಮತಿ ಬಿ.ವಿ. ರಾಮಲತಾ, ಶ್ರೀಮತಿ ಕುಮಾರಿ ಹೊನ್ನಮ್ಮ, ರಾಜ್ಯ ಸಂಘಟನಾ ಆಯುಕ್ತರು (ಗೈ) ಪರೀಕ್ಷಾ ವಿಭಾಗದ ಮತ್ತು ದಿ॥ ಕಮಲಾಕ್ಷಿ ಹೆಗಡೆರವರು ಶ್ರಮ ಪಟ್ಟಿದ್ದಾರೆ. ಇವರಿಗೂ ಮತ್ತು ಈ ಮುದ್ರಣಕ್ಕೆ ಸಹಕಾರ ನೀಡಿದ ಶ್ರೀಮತಿ ಗೀತಾನಟರಾಜ್, ಶ್ರೀಮತಿ ಮಂಜುಳ ಸಿ. ಮತ್ತು ಶ್ರೀಮತಿ ಕೆ.ವಿ. ಶಾಮಲರವರಿಗೂ ನನ್ನ ವಂದನೆಗಳು.

**ಗೊ.ರು. ಚನ್ನಬಸಪ್ಪ**
**ಅಧ್ಯಕ್ಷ, ಪ್ರಕಟಣಾ ಸಮಿತಿ**

# ಮುನ್ನುಡಿ

ಬುಲ್‌ಬುಲ್ ಮಕ್ಕಳ ಕಲಿಕೆಯಲ್ಲಿ ತರಬೇತುದಾರರ ಪಾತ್ರ ಮಹತ್ವವಾದುದು. ತರಬೇತುದಾರರ ಜ್ಞಾನ, ಅರಿವು, ತಿಳುವಳಿಕೆ ಮತ್ತು ಸ್ಪಷ್ಟ ಮಾಹಿತಿಗಳು ತರಬೇತಿ ನೀಡುವಲ್ಲಿ ಬಹಳ ಅವಶ್ಯಕವಾಗಿರುತ್ತದೆ.

ಈ ಹಿಂಡಿನ ನಾಯಕಿಯರ ಕೈಪಿಡಿ ಪುಸ್ತಕವನ್ನು ರಾಷ್ಟ್ರೀಯ ಕಛೇರಿ ನವದೆಹಲಿಯುವರು 2016ರಲ್ಲಿ ಇಂಗ್ಲೀಷ್‌ನಲ್ಲಿ ಪ್ರಕಟಿಸಿದ್ದಾರೆ. ಹಿಂಡಿನ ನಾಯಕಿಯರ ಈ ಬುಲ್‌ಬುಲ್ ಕೈಪಿಡಿಯನ್ನು ಕನ್ನಡಕ್ಕೆ ರಾಜ್ಯ ಜಂಟಿ ಕಾರ್ಯದರ್ಶಿಯಾಗಿದ್ದ ದಿ॥ ಎಸ್.ಕೆ. ಪ್ರಭಾ, ಎಲ್.ಟಿ.(ಗೈಡ್)ರವರು ಭಾಷಾಂತರದ ಕೆಲಸವನ್ನು ಪೂರ್ಣಗೊಳಿಸಿದ್ದು, ಈ ಪಠ್ಯಕ್ರಮಕ್ಕೆ ವಿಶೇಷ ವಿವರಣೆ ಕೊಡುವುದರ ಮೂಲಕ ರಾಜ್ಯ ಆಯುಕ್ತರು (ಗೈ) ವ.ಸಂ. ಶ್ರೀಮತಿ ಬಿ.ವಿ. ರಾಮಲತಾ ಎಲ್.ಟಿ.(ಆರ್) ಸಹಾಯಕ ರಾಜ್ಯ ಆಯುಕ್ತರಾದ ಶ್ರೀಮತಿ ಬಿ. ರೇವತಿ, ಎಲ್.ಟಿ.(ಬಿ)ಯವರು ಮತ್ತು ಶ್ರೀಮತಿ ಕುಮಾರಿ ಹೊನ್ನಮ್ಮ ಎಲ್.ಟಿ.(ಗೈ) ಸಹಾಯಕ ರಾಜ್ಯ ಸಂಘಟನಾ ಆಯುಕ್ತರು, ಪರೀಕ್ಷಾ ವಿಭಾಗ ಸಹಕರಿಸಿದ್ದು ಹಾಗೂ ಶ್ರೀಮತಿ ಬಿ.ಡಿ. ಶಾಂತ, ಎಲ್.ಟಿ.(ಗೈ)ರವರು ತಿದ್ದುಪಡಿಯನ್ನು ಮಾಡಿರುವುದಕ್ಕೆ ಅವರುಗಳನ್ನು ಅಭಿನಂದಿಸುತ್ತೇನೆ.

ಈ ಬುಲ್‌ಬುಲ್ ಚಟುವಟಿಕೆ ಪುಸ್ತಕವನ್ನು ಹೊರತರಲು ಪ್ರೋತ್ಸಾಹಿಸಿದ, ರಾಜ್ಯ ಮುಖ್ಯ ಆಯುಕ್ತರಾದ ಶ್ರೀಯುತ ಪಿ.ಜಿ.ಆರ್. ಸಿಂಧ್ಯ, ರಾಜ್ಯ ಸಂಸ್ಥೆಯ ಪ್ರಕಟಣಾ ಸಮಿತಿಯ ಅಧ್ಯಕ್ಷರಾದ ಡಾ॥ ಗೊ.ರು. ಚನ್ನಬಸಪ್ಪರವರು, ರಾಜ್ಯ ಉಪಾಧ್ಯಕ್ಷರಾದ ಶ್ರೀಯುತ ಕೊಂಡಜ್ಜಿ ಬ. ಷಣ್ಮುಖಪ್ಪ, ರಾಜ್ಯ ಗೈಡ್ ಸಂಘಟನಾ ಆಯುಕ್ತರಾದ ಶ್ರೀಮತಿ ಸಿ. ಮಂಜುಳಾ, ರಾಜ್ಯ ಗೈಡ್ ತರಬೇತಿ ಆಯುಕ್ತರಾದ ಶ್ರೀಮತಿ ಕೆ.ವಿ. ಶಾಮಲ ಇವರುಗಳಿಗೆ ನನ್ನ ಹೃತ್ಪೂರ್ವಕ ಅಭಿನಂದನೆಗಳು.

ಈ ಬುಲ್‌ಬುಲ್ ಹಿಂಡಿನ ನಾಯಕಿಯರ ಕೈಪಿಡಿ ಪುಸ್ತಕದಲ್ಲಿ ಅವಶ್ಯಕವಾದ ವಿವರಣೆಗಳನ್ನು ನೀಡಿರುವುದು ಶ್ಲಾಘನೀಯ. ಇದರಲ್ಲಿ ತಿಳಿಸಿರುವ ಎಲ್ಲಾ ಮಾಹಿತಿಗಳು ಸೂಕ್ತ ಕಲಿಕೆಗೆ ಸಹಕಾರಿಯಾಗಿ ಉತ್ತಮ ಪ್ರತಿಫಲ ನೀಡುವಂತಾಗಲಿ ಎಂದು ಆಶಿಸುತ್ತೇನೆ.

**ಗೀತಾ ನಟರಾಜ್**
ರಾಜ್ಯ ಆಯುಕ್ತರು (ಗೈಡ್ಸ್)

# ಪರಿವಿಡಿ

ಭಾಗ-1

# 1. ಚಳವಳಿಯ ಸಂಕ್ಷಿಪ್ತ ಇತಿಹಾಸ

ಗೈಡಿಂಗ್ ವಿಶ್ವದಾದ್ಯಂತ ಹೆಣ್ಣುಮಕ್ಕಳ, ಯುವತಿಯರ ಬೃಹತ್ ಸಮವಸ್ತ್ರಧಾರಿ ಚಳವಳಿ ಎಂದು ಮಾನ್ಯತೆ ಪಡೆದಿದೆ. ಇಂದು 146 ರಾಷ್ಟ್ರಗಳು ಸೇರಿ ಸುಮಾರು 11 ಮಿಲಿಯನ್ ಸದಸ್ಯರು ಈ ಚಳವಳಿಯಲ್ಲಿದ್ದಾರೆ. ಉತ್ತಮವಾದ ಮೂಲ ಸಿದ್ಧಾಂತಗಳ ಆಧಾರದ ಮೇಲೆ ಹೆಣ್ಣುಮಕ್ಕಳ ಅಭಿವೃದ್ಧಿಗಾಗಿ ಕಾರ್ಯಕ್ರಮಗಳನ್ನು ರೂಪಿಸಿ ಅವರನ್ನು "ಆರೋಗ್ಯವಂತ, ಆನಂದದಾಯಕ ಉಪಯುಕ್ತ" ಪ್ರಜೆಗಳನ್ನಾಗಿ ಮಾಡುವಲ್ಲಿ ಈ ಚಳವಳಿ ಯಶಸ್ವಿಯಾಗಿದೆ.

1899ರಲ್ಲಿ ದಕ್ಷಿಣ ಆಫ್ರಿಕಾದ ಬೋಯರ್ಸ್‌ಗಳೊಡನೆ ಮೆಫಕಿಂಗ್‌ನಲ್ಲಿ ಬಿ.ಪಿ.ಯವರ ನಾಯಕತ್ವದಲ್ಲಿ ಯುದ್ಧನಡೆಯಿತು. ಸೈನಿಕರ ಕೊರತೆ ನೀಗಿಸಲು ಉತ್ಸಾಹ ಹಾಗು ಕುತೂಹಲಿ ಬ್ರಿಟಿಷ್ ಗಂಡುಮಕ್ಕಳನ್ನು ಕರೆತಂದು ಒಂದು ಬಾಲಕರ ತಂಡ ರಚಿಸಿದರು. ಅವರಿಗೆ ದೂತಸೇವೆಗಾಗಿ ತರಬೇತಿ ನೀಡಿದರು. ಸಮವಸ್ತ್ರ ಮತ್ತು ಸೈಕಲ್ ನೀಡಿದರು. ಬಾಲಕರು ತಮ್ಮ ಜವಾಬ್ದಾರಿಯನ್ನು ಉತ್ತಮೋತ್ತಮ ರೀತಿಯಲ್ಲಿ ನಿರ್ವಹಿಸಿ ಎಲ್ಲರ ಮೆಚ್ಚುಗೆಗೆ ಪಾತ್ರರಾದರು. ಮಾಧ್ಯಮಗಳು ಅವರನ್ನು ಕೊಂಡಾಡಿದವು. ಆಗ "ಬಾಲಕರಿಗೇಕೆ ಸ್ಕೌಟಿಂಗ್ ತರಬೇತಿ ನೀಡಬಾರದೆಂಬ" ವಿಚಾರ ಪ್ರಥಮವಾಗಿ ಬಿಪಿಯವರ ಮನಸ್ಸಿನಲ್ಲಿ ಮೂಡಿತು. 1901ರಿಂದ 1907ರವರೆಗೆ ಸ್ವಯಂ ಶಿಕ್ಷಣ, ಮನರಂಜನೆ, ವನಸಾಹಸ, ಜಲಸಾಹಸ, ಪ್ರಕೃತಿವಾಸ – ಹೀಗೆ ಯುವಕರಿಗೆ ಇಷ್ಟವಾಗುವ ಕಾರ್ಯಕ್ರಮಗಳನ್ನು ರೂಪಿಸಿದರು. 1907 ಜುಲೈ 29ರಿಂದ ಆಗಸ್ಟ್ 8ರವರೆಗೆ ಬ್ರೌನ್ಸಿದ್ವೀಪದಲ್ಲಿ 20 ಬಾಲಕರಿಗೆ ಶಿಬಿರ ಏರ್ಪಡಿಸಿ ಇದನ್ನು ಪ್ರಯೋಗಿಸಿದರು. ಶಿಬಿರ ಯಶಸ್ವಿಯಾಯಿತು. ಬಾಲಕರ ಸ್ಕೌಟಿಂಗ್ ಪ್ರಾರಂಭವಾಯಿತು! 1908 ಜನವರಿ 1 ರಂದು "ಬಾಲಕರಿಗಾಗಿ ಸ್ಕೌಟಿಂಗ್" (Scouting for Boys) ಎಂಬ ಶೀರ್ಷಿಕೆಯಲ್ಲಿ 6 ಕಂತಿನಲ್ಲಿ ಪಾಕ್ಷಿಕವಾಗಿ (15 ದಿನಕ್ಕೊಮ್ಮೆ) ಬರಹಗಳನ್ನು ಪ್ರಕಟಿಸಿದರು. ನಂತರ ಇದನ್ನು ಪರಿಷ್ಕರಿಸಿ "Scouting for Boys" ಪುಸ್ತಕವನ್ನು ಬಿಡುಗಡೆ ಮಾಡಿದರು.

ಬಾಲಕರು ಅಲ್ಲಲ್ಲಿ ಚಿಕ್ಕಚಿಕ್ಕ ಗುಂಪುಗಳಲ್ಲಿ ಸ್ಕೌಟಿಂಗ್ ಚಟುವಟಿಕೆ ಪ್ರಾರಂಭಿಸಿದರು. ಇದನ್ನು ಕಂಡು ಕೆಲವೇ ಹೆಣ್ಣುಮಕ್ಕಳು ಇಂಗ್ಲೆಂಡಿನಲ್ಲಿ

ಬಾಲಕರನ್ನು ಅನುಕರಿಸಿ, "ಸ್ಕೌಟಿಂಗ್ ಫಾರ್ ಬಾಯ್ಸ್" ಪುಸ್ತಕವನ್ನು ಕೊಂಡು ಸ್ಕೌಟಿಂಗ್ ಚಟುವಟಿಕೆ ಪ್ರಾರಂಭಿಸಿದರು. ಬಿ.ಪಿ.ಯವರಿಗೆ ಉತ್ತರಿಸಲಾರದಷ್ಟು ಪತ್ರಗಳನ್ನು ಮಕ್ಕಳು ಹಾಗೂ ಹಿರಿಯರು ಬರೆದರು. ಬಿ.ಪಿ.ಯವರು 4 ಸೆಪ್ಟೆಂಬರ್ 1909ರಂದು ಪ್ರಪ್ರಥಮ ಸ್ಕೌಟ್ ರ್ಯಾಲಿಯನ್ನು ಕ್ರಿಸ್ಟಲ್ ಪ್ಯಾಲೇಸ್ ಲಂಡನ್‌ನಲ್ಲಿ ಸಂಘಟಿಸಿದರು. 11 ಸಾವಿರ ಬಾಲಕರು ಬಿಪಿಯವರಿಗೆ ಘನವಂದನೆ ಸಲ್ಲಿಸುತ್ತಾ ಮುನ್ನಡೆದರು. ಕೊನೆಯದಾಗಿ ಏಳು ಹೆಣ್ಣುಮಕ್ಕಳ ಚಿಕ್ಕಗುಂಪು (ಪ್ಯಾಟ್ರೋಲ್/ಅಷ್ಟಕ) ಪ್ರವೇಶಿಸಿ ಬಿ.ಪಿ.ಯವರಿಗೆ ಘನವಂದನೆ ಸಲ್ಲಿಸಲು ಮುಂದಾದರು. ಬಿಪಿಯವರಿಗೆ ಆಶ್ಚರ್ಯವಾಯಿತು. "ನೀವ್ಯಾರೆಂದು ಕೇಳಿದಾಗ, ನಾವು wolf ಪ್ಯಾಟ್ರೋಲ್‌ನ "ಗರ್ಲ್‌ಸ್ಕೌಟ್" ಎಂದರು.

"ನಾನು ಬಾಲಕರಿಗಾಗಿ ಸ್ಕೌಟಿಂಗ್ ಪ್ರಾರಂಭಿಸಿದ್ದು "ಗರ್ಲ್ ಸ್ಕೌಟ್‌ನ್ನು ಪ್ರಾರಂಭಿಸಿಲ್ಲ" ಎಂದರು. ಬಾಲಕಿಯರು "ನಾವು ಗರ್ಲ್ ಸ್ಕೌಟ್ಸ್ ಇದ್ದೇವಲ್ಲ" ಎಂದರು.

ಬಿ.ಪಿ.ಯವರು ವಂದನೆ ಸ್ವೀಕರಿಸಿ ಕಳುಹಿಸಿದರು. ರ್ಯಾಲಿ ನಂತರ ಬಾಲಕಿಯರೊಡನೆ ಬಿ.ಪಿ.ಯವರು ಚರ್ಚಿಸಿದರು. ಈ ಚಟುವಟಿಕೆ ನಿಮಗಲ್ಲ ಎಂದು ತಿಳಿ ಹೇಳಿದರು. ಛಲ ಬಿಡದೆ ಬಾಲಕಿಯರು ನಾವು ಚಟುವಟಿಕೆ ಮಾಡಬಲ್ಲೆವು ಎಂದಾಗ ಬಿ.ಪಿ. ಅವರಿಗೆ ಮಣಿದು ಗರ್ಲ್ ಸ್ಕೌಟ್‌ಗೆ ಮನ್ನಣೆ ನೀಡಿದರು. ಬಿಪಿಯವರು ಇವರ ಜವಾಬ್ದಾರಿಯನ್ನು ಸೋದರಿ ಆಗ್ನೆಸ್ ಬಿಪಿಯವರಿಗೆ ವಹಿಸಿದರು. ಗರ್ಲ್ ಸ್ಕೌಟಿಂಗ್ ಪ್ರಾರಂಭವಾಯಿತು!

1910ರಲ್ಲಿ ಬಿ.ಪಿ.ಯವರು "ಗರ್ಲ್ ಸ್ಕೌಟಿಂಗ್" ಅನ್ನು "ಗರ್ಲ್ ಗೈಡ್" ಎಂದು ಪುನರ್ ನಾಮಕರಣ ಮಾಡಿದರು. 10 ಏಪ್ರಿಲ್ 1910ರಂದು ಇಂಪೀರಿಯಲ್ ಸ್ಕೌಟ್ ಹೆಡ್ ಕ್ವಾರ್ಟ್ಸ್‌ನಲ್ಲಿ ಲಂಡನ್ನಿನಲ್ಲಿ ಒಂದು ಕೊಠಡಿಯನ್ನು ನೀಡಿ ಗರ್ಲ್‌ಗೈಡ್ ಪ್ರಧಾನ ಕಛೇರಿ ಸ್ಥಾಪಿಸಿದರು. ಆಗ್ನೆಸ್ ಬಿಪಿ ಪ್ರಥಮ ಅಧ್ಯಕ್ಷರಾದರು. 10 ಏಪ್ರಿಲ್ 1910ರಂದು ಗರ್ಲ್ ಸ್ಕೌಟ್ ಮತ್ತು ಗರ್ಲ್ ಗೈಡ್ ಅಧಿಕೃತವಾಗಿ ಪ್ರಾರಂಭವಾಯಿತು.

ಚಳವಳಿಯ ಶತಮಾನೋತ್ಸವವನ್ನು ವಿಶ್ವದಾದ್ಯಂತ ಹಾಗು ಭಾರತದಲ್ಲಿ ಸಂಭ್ರಮದಿಂದ ಆಚರಿಸಲಾಯಿತು. ಬಿ.ಪಿ.ಯವರ ಸಲಹೆ ಮತ್ತು ಸಹಾಯದಿಂದ "How Girl's can help to build the Empire" ಎಂಬ ಪುಸ್ತಕವನ್ನು ಆಗ್ನೆಸ್ ಬಿಪಿಯವರು ಬರೆದು ಪ್ರಕಟಿಸಿದರು. ಈ ಪುಸ್ತಕ ಗೈಡಿಂಗ್‌ಗೆ ಚಾಲನೆ ನೀಡಿತು.

ಬಿಪಿಯವರು 1912ರಲ್ಲಿ ಅಲೇವ್ ಕ್ಲೇರ್ ಸೋಮ್ಸ್‌ರವರನ್ನು ವಿವಾಹವಾದರು. ಇವರಿಬ್ಬರು ಆಕಸ್ಮಿಕವಾಗಿ ಭೇಟಿಯಾಗಿ ಮೊದಲ ನೋಟದಲ್ಲೇ ಪ್ರೇಮ ಅಂಕುರಿಸಿ ವಿವಾಹವಾದರು. ಬಿಪಿಯವರು ಅಲೇವರಿಗಿಂತ 32 ವರ್ಷ ಹಿರಿಯರು. ಇಬ್ಬರೂ ಹುಟ್ಟಿದ್ದು ಫೆಬ್ರುವರಿ 22 ಆದರೂ ಅವರೀರ್ವರ ದಾಂಪತ್ಯ ಜೀವನ ಅನ್ಯೋನ್ಯತೆಗೆ ಉದಾಹರಣೆಯಾಗಿದೆ. ಅಲೇವ್‌ರವರಿಗೆ ವಿವಾಹದ ಮುನ್ನವೇ ಮೇಫ್‌ಕಿಂಗ್ ವೀರಯೋಧ ಬಿ.ಪಿ.ಯವರ ಬಗ್ಗೆ ಅಭಿಮಾನವಿತ್ತು. 12 ವರ್ಷದ ಹುಡುಗಿ ಅವರ ಛಾಯಾಚಿತ್ರವಿರುವ ಮೆಡಲ್‌ಅನ್ನು ಕೊಂಡು ಧರಿಸಿದ್ದಳು. ಗೈಡಿಂಗ್ ಪ್ರಾರಂಭವಾದಾಗ ಅದಕ್ಕೆ ಸೇರಲು ಇಷ್ಟಪಟ್ಟಳು. ಆದರೆ ಅವರ ತಾಯಿ ಅವಳ ಆಸೆಗೆ ತಣ್ಣೀರೆರಚಿದಳು. ಅಲೇವ್ ಲೇಡಿ ಬಿ.ಪಿ.ಯವರು ವಿವಾಹದ ನಂತರ ತನ್ನನ್ನು ತಾನೇ ಈ ಚಳವಳಿಯಲ್ಲಿ ತೊಡಗಿಸಿಕೊಂಡರು. 1916ರಲ್ಲಿ ಗೈಡಿಂಗ್‌ನ ಜಿಲ್ಲಾ ಆಯುಕ್ತರಾದರು. 1918ರಲ್ಲಿ ಪ್ರಧಾನ ಆಯುಕ್ತರಾದರು.

ಅಲೇವ್ ಲೇಡಿ ಬಿಪಿಯವರು ಸಂಪೂರ್ಣವಾಗಿ ತಮ್ಮನ್ನು ಚಳವಳಿಯ ಬೆಳವಣಿಗೆಗೆ ಮತ್ತು ಅಭಿವೃದ್ಧಿಗಾಗಿ ಕೊನೆ ಉಸಿರಿರುವತನಕ ಶ್ರಮಿಸಿದರು. ಅವರ ಆತ್ಮವಿಶ್ವಾಸ ಅವರ ಕುತೂಹಲ ಮತ್ತು ನಂಬಿಕೆ ಚಳವಳಿಯನ್ನು ಬೆಳೆಸಿತು. 1919 ಅಂತರಾಷ್ಟ್ರೀಯ ಸಮಿತಿಯನ್ನು ರಚಿಸಿದರು. 1920ರಲ್ಲಿ ಆಕ್ಸ್‌ಫರ್ಡ್‌ನಲ್ಲಿ ಮೊದಲ ಅಂತರಾಷ್ಟ್ರೀಯ ಗೈಡ್ ಸಮ್ಮೇಳನವನ್ನು ಆಯೋಜಿಸಿದರು. ಈ ಸಮ್ಮೇಳನದಲ್ಲಿ ವಿಶ್ವಗೈಡ್ ಸಂಸ್ಥೆಯ ವಿಚಾರ ಹಾಗು ಅವಶ್ಯಕತೆಯನ್ನು ಮನಗಾಣಲಾಯಿತು. ನಂತರ 1928ರಲ್ಲಿ ವಿಶ್ವಗರ್ಲ್ ಸ್ಕೌಟ್ ಮತ್ತು ಗರ್ಲ್ ಗೈಡ್ ಸಂಸ್ಥೆಯನ್ನು (WAGGGS) Pax lodge ಲಂಡನ್‌ನಲ್ಲಿ ಸ್ಥಾಪಿಸಲಾಯಿತು. ಸ್ಥಾಪಕ ಸದಸ್ಯರಲ್ಲಿ ಭಾರತವು ಒಂದು ಎಂದು ತಿಳಿಸಲು ಹೆಮ್ಮೆಯಾಗುತ್ತದೆ. 1924ರಲ್ಲಿ ನಡೆದ 4ನೇ ಅಂತರಾಷ್ಟ್ರೀಯ ಸಮ್ಮೇಳನದಲ್ಲಿ ಲಾರ್ಡ್ ಮತ್ತು ಲೇಡಿ ಬಿಪಿಯವರ ಹುಟ್ಟುಹಬ್ಬವನ್ನು 22ನೇ ಫೆಬ್ರುವರಿಯಂದು **ಚಿಂತನ ದಿನಾಚರಣೆ** (Thinking day) ಎಂದು ಆಚರಿಸಲು ನಿರ್ಧರಿಸಲಾಯಿತು. ವಿಶ್ವದಾದ್ಯಂತ ಆ ಮಹಾನ್ ಚೇತನಗಳನ್ನು ಸ್ಮರಿಸುತ್ತಾ ಅಂದು ಚಟುವಟಿಕೆ ಮತ್ತು ಕಾರ್ಯಕ್ರಮಗಳನ್ನು ಸ್ಕೌಟ್ಸ್-ಗೈಡ್ಸ್‌ಗಳು ಹಮ್ಮಿಕೊಳ್ಳುವರು. ಈ ದಿನದಂದು ನಿಧಿ ಸಂಗ್ರಹಿಸಲಾಗುವುದು. ಈ ನಿಧಿಯು ವಿಶ್ವಗೈಡ್ ಸಂಸ್ಥೆಯ ಆದಾಯದ ಮುಖ್ಯ ಸಂಪನ್ಮೂಲವಾಗಿದೆ. ಇದನ್ನು ಗೈಡಿಂಗ್‌ನ ಅಭಿವೃದ್ಧಿ ಕಾರ್ಯಗಳಿಗೆ ಬಳಸಲಾಗುವುದು.

ವಿಶ್ವಗೈಡ್ ಸಂಸ್ಥೆ ಐದು ಅಂತರಾಷ್ಟ್ರೀಯ ವಿಶ್ವಕೇಂದ್ರಗಳನ್ನು ಸ್ಥಾಪಿಸಿದೆ. ಅದರಲ್ಲಿ ನಾಲ್ಕನೇ ಕೇಂದ್ರ ಸಂಗಮ್ ಪುಣೆ-ಭಾರತದಲ್ಲಿದೆ. ಇದನ್ನು ಉದ್ಘಾಟಿಸಿದವರು ಲೇಡಿ ಅಲೇವ್ ಬಿ.ಪಿ. ನೀವು ಇಲ್ಲಿ ನಡೆಯುವ ಅಂತರಾಷ್ಟ್ರೀಯ

ಕಾರ್ಯಕ್ರಮಗಳಲ್ಲಿ ಭಾಗವಹಿಸಬಹುದು. ಸದಸ್ಯ ರಾಷ್ಟ್ರಗಳು ಒಂದು ಉದ್ದೇಶಕ್ಕಾಗಿ ಅಂದರೆ ವಿಶ್ವ ಭಗಿನಿತ್ವ, ವಿಶ್ವ ಭ್ರಾತೃತ್ವ ಧ್ಯೇಯದಿಂದ ಒಂದೆಡೆ ಕೂಡಿ ಕಾರ್ಯಕ್ರಮದಲ್ಲಿ ಪಾಲ್ಗೊಳ್ಳುತ್ತಾರೆ. ಹಾಗು ಈ ಕೇಂದ್ರಗಳಲ್ಲಿ ಪ್ರವಾಸಕ್ಕಾಗಿ, ರಜಾದಿನಗಳನ್ನು ಕಳೆಯಲು ಈ ಭವನಗಳಲ್ಲಿ ಬಂದು ತಂಗುತ್ತಾರೆ. ಒಟ್ಟಿನಲ್ಲಿ ಅಂತರಾಷ್ಟ್ರೀಯ ಅರಿವು ಮೂಡಿಸುವಲ್ಲಿ ಇದು ಸದ್ಭಾವನಾ ತಳಹದಿಯಾಗಿದೆ.

**"ಕೃತಜ್ಞತೆಯಿಂದ ಹಿಂತಿರುಗಿ ನೋಡು**
**ಸುತ್ತಮುತ್ತಲೂ ಆತ್ಮವಿಶ್ವಾಸದಿಂದ ನೋಡು**
**ಮುಂದಕ್ಕೆ ನೋಡು"** **– ಬಿ.ಪಿ.**

| | | |
|---|---|---|
| **ರಾಬರ್ಟ್ ಸ್ಟೀಫನ್ ಸನ್ ಸ್ಮಿತ್ ಬೇಡನ್ ಪಾವೆಲ್ 22.02.1857 ರಿಂದ 08.01.1941** | **ಆಗ್ನೆ ಬೇಡನ್ ಪಾವೆಲ್ 16.12.1858ರಿಂದ 02.06.1945** | **ಅಲೇವ್ ಕ್ಲೇರ್ ಸೋಮ್ಸ್ ಬೇಡನ್ ಪಾವೆಲ್ 22.02.1889ರಿಂದ 26.06.1977** |

ದೇಶ ವಿದೇಶಗಳಲ್ಲಿ ಗೈಡಿಂಗ್ ಬೆಳೆಯಲಾರಂಭಿಸಿತು. ಗೈಡ್‌ಗಳು 11ರಿಂದ 16 ವರ್ಷದ ಬಾಲಕಿಯರು. ಇವರು ಗೈಡ್‌ದಳ ಸಭೆಗೆ ಹೊರಟರೆ ಕಿರಿಯರು ದುಂಬಾಲು ಬೀಳುತ್ತಿದ್ದರು. ತಮ್ಮನ್ನು ಕರೆಮುಕೊಂಡು ಹೋಗದೆ ಅಕ್ಕಂದಿರು ಗೈಡ್ ಸಭೆಗೆ ಹೋಗುವಂತೆ ಇರಲಿಲ್ಲ. ಪ್ರತಿ ಗೈಡ್‌ದಳದಲ್ಲೂ ಕಿರಿಯ ಸೋದರಿಯರ ಚಿಕ್ಕ ಗುಂಪು ಅನಿವಾರ್ಯವಾಗಿರುತಿತ್ತು. ಇವರು ಕೂಡ ಅಕ್ಕಂದಿರಂತೆ ಗೈಡ್‌ಗಳಾಗಬೇಕೆಂದು ಬಯಸುತ್ತಿದ್ದರು.

❖

# 2. ಬುಲ್‌ಬುಲ್ ವಿಭಾಗದ ಹುಟ್ಟು ಬೆಳವಣಿಗೆ

ಕಿರಿಯರು ಹಿರಿಯರ ಚಟುವಟಿಕೆಗಳನ್ನು ನೋಡುತ್ತಾ ಕಾಪಿ ಮಾಡುತ್ತಿದ್ದರು. ಇವರು 5ರಿಂದ 10 ವರ್ಷದವರು ಬುಲ್‌ಬುಲ್‌ಗಳು 10 ತುಂಬಿದವರು ಗೈಡ್ಸ್‌ಗಳು ಮಾಡುತ್ತಿದ್ದ ಚಟುವಟಿಕೆ ಕಿರಿಯರಿಗೆ ಕಷ್ಟಕರವಾಗಿರುತ್ತಿತ್ತು. ಕೆಲವೊಮ್ಮೆ ಅಪತ್ಕಾರಿಯೂ ಆಗುತ್ತಿತ್ತು. ಸಮಯ ಕಳೆದಂತೆ ಕಿರಿಯರು ತಿರಸ್ಕರಿಸಲಾರದ ಅನಿವಾರ್ಯತೆಯಾದರು. ಇದರಿಂದ ಹಿರಿಯಕ್ಕಂದಿರು ಕಿರಿಯರಿಗೆ ಏನಾದರೂ ಮಾಡಲೇಬೇಕು ಎಂದು ಮನಸ್ಸು ಮಾಡಿದರು. ಹಿರಿಯರು ಈ ಕಿರಿಯ ವಯಸ್ಸಿನವರಿಗೆ ತಕ್ಕ ಚಟುವಟಿಕೆಗಳನ್ನು ರೂಪಿಸಿದರೆ ಎಳೆಯ ವಯಸ್ಸಿನಿಂದಲೆ ಒಳ್ಳೆಯವರಾಗಿ ಶಿಸ್ತಿನಿಂದ ಬೆಳೆಯುವರೆಂದು ಭಾಸವಾಯಿತು. ಇದರಿಂದ ಗೈಡ್ಸ್‌ಗಳಿಗಾಗುತ್ತಿದ್ದ ತೊಂದರೆ ನಿವಾರಣೆಯಾಗಿ ಸಮಯ ಉಳಿತಾಯವಾಗಿ ಅವರು ಹೆಚ್ಚು ಏಕಾಗ್ರತೆಯಿಂದ ಗೈಡ್ ಚಟುವಟಿಕೆಗಳಲ್ಲಿ ತೊಡಗಿಕೊಳ್ಳಬಹುದು ಎನ್ನಿಸಿತು.

ಈ ವಿಚಾರವನ್ನು ಗೈಡ್ ಶಿಕ್ಷಕಿಯರು ಮತ್ತು ಪೋಷಕರು ಬೇಡನ್ ಪಾವೆಲ್ಲರ ಮುಂದಿಟ್ಟರು. ಅವರು ಆಗ್ನೆಸ್ ಬೇಡನ್ ಪಾವೆಲ್ಲರು ಮತ್ತು ತಜ್ಞರೊಡನೆ ಚರ್ಚಿಸಿ 05–10ರ ವಯೋಮಾನಕ್ಕೆ ಅನುಗುಣವಾದ ಕಾರ್ಯಕ್ರಮ ರೂಪಿಸಿದರು ಹಾಗೂ ಕಿರಿಯರ ವಿಭಾಗವನ್ನು ತೆರೆದರು.

1914ರಲ್ಲಿ ಕಿರಿಯರಿಗೆ ಆಟಪಾಠಗಳನ್ನು ರೂಪಿಸಿದರು. ಅನೇಕರು ಕಿರಿಯರನ್ನು ಚಿಕ್ಕ ಗುಂಪುಗಳಲ್ಲಿ ಸೇರಿಸಿ ಆಗಲೇ ಆಟವಾಡಿಸಲು ಪ್ರಾರಂಭಿಸಿದ್ದರು. ಆದರೆ ಈ ಕಿರಿಯರ ಗುಂಪಿಗೆ ಒಂದು ಹೆಸರಿಡುವ ಪ್ರಥಮ ಕಾರ್ಯ ನಡೆಯಬೇಕಿತ್ತು. ಕೆಲವು ಕಾವ್ಯ ಮನೋಭಾವದವರು ಇವರನ್ನು "ರೋಸ್ ಬಡ್" ಎಂದು ಕರೆದರು. ಇದು ಈ ವಿಭಾಗದ ಮೊದಲ ಹೆಸರಾಯಿತು. ಮೊಗ್ಗಗಳು ಅರಳಿ ಹೂವಾಗಬೇಕೆಂದು ಬಯಸಿದರು. ಕೆಲವರಿಗೆ ಮೊಗ್ಗುಗಳು ಚಟುವಟಿಕೆಯಾಗಿರುವುದಿಲ್ಲ ಎನ್ನಿಸಿತು. ಆದರೆ ಮಕ್ಕಳು ಪ್ರತಿಜ್ಞೆ ಮತ್ತು ಪರೀಕ್ಷೆಗಳನ್ನು ಸಂತೋಷವಾಗಿ ಸ್ವೀಕರಿಸಿದರು.

ಈ ಮೊಗ್ಗುಗಳು (ಮಕ್ಕಳು) ಅಚ್ಚನೀಲಿ ಅಂಗಿ ಮತ್ತು ಟೋಪಿ ಧರಿಸಿ ಬಿಳಿ ತೂಗುಚೀಲ ಹಾಕಿಕೊಂಡು ನೀಲಿ ರಿಬನ್ ಕಟ್ಟಿಕೊಂಡು ಗೈಡ್‌ಗಳಂತೆ ಕಾಣುವ ಪ್ರಯತ್ನ ಮಾಡುತ್ತಿದ್ದರು. ಇವರು ಎರಡು ಬೆರಳಿನಿಂದ ವಂದಿಸುತ್ತಿದ್ದರು. ಎರಡು ಅಂಶ ಉಳ್ಳ ಪ್ರತಿಜ್ಞೆಯನ್ನು ಇವರು ಮಾಡುತ್ತಿದ್ದರು.

1 ದೇವರು ಮತ್ತು ರಾಜನಿಗೆ ಕರ್ತವ್ಯವನ್ನು ಸಲ್ಲಿಸಬೇಕು.

2. ಪ್ರತಿದಿನವೂ ಒಂದು ಒಳ್ಳೆಯ ಕೆಲಸ ಮಾಡಬೇಕು.

ಗೈಡ್ ದಳದ ಹಿರಿಯನಾಯಕಿ (ಗೈಡ್ ಕ್ಯಾಪ್ಟೆನ್) ಹೊಸ ಬಡ್ಸ್‌ಗಳ ವ್ಯವಸ್ಥಾಪನೆಯಲ್ಲಿ ತೊಡಗಿದರು. ಹೊಸ ಬಡ್ಸ್‌ನ ಹಿರಿಯ ಸಹ ನಾಯಕಿಯರು ಸಹಾಯ ಮಾಡುತ್ತಿದ್ದರು. Dubesorauoyera? (Are you a rose bud) ಎಂದು ಪ್ರಶ್ನೆ ಕೇಳಿದರೆ ಮೊಗ್ಗುಗಳು ಹೆಮ್ಮೆಯಿಂದ "Dubamai" ಎಂದು ಉತ್ತರಿಸುವರು. ಹೀಗೆಂದರೇನು ಎನ್ನುವಿರಾ? ಕೊನೆಯಿಂದ ಓದಿ ಉತ್ತರ ಸಿಗುತ್ತದೆ- I am a bud ಮಕ್ಕಳು ಹಿಂದುಮುಂದು ಮಾಡಿ ಮಾತನಾಡುತ್ತಿದ್ದರು.

ಮೊಗ್ಗುಗಳು ತಮ್ಮ ರಾಷ್ಟ್ರಧ್ವಜ "ಯುನಿಯನ್ ಜಾಕ್"ನ ರಚನೆ ಮತ್ತು ಅದನ್ನು ಹಾರಿಸುವ ವಿಧಾನಗಳು, ವಿವಿಧ ರೀತಿಯ ಗಂಟುಗಳು ಅವುಗಳ ಬಳಕೆ, ಹಾಡು, ಆಟ, ಕಥೆಗಳನ್ನು ಕಲಿತರು. ಮೊದಲನೆ ಮಹಾಯುದ್ಧ ಪ್ರಾರಂಭವಾದಾಗ ಕ್ರಷೆಯಲ್ಲಿ ಮಫ್ಲರ್‌ಗಳ್ನು ಸೈನಿಕರಿಗಾಗಿ ಹೆಣೆದರು. ಅವರಿಗಾಗಿ ಸುರುಳಿ ಬ್ಯಾಂಡೇಜ್ ಮತ್ತು ವರ್ತಮಾನ ಪತ್ರಿಕೆಗಳನ್ನು ಸಂಗ್ರಹಿಸಿದರು. ಈ ವಿಭಾಗವನ್ನು ಪ್ರಾರಂಭಿಸಿದ ಆಗ್ನೇಸ್ ಬೇಡನ್ ಪಾವೆಲ್ಲ ರೋಸ್ ಬಡ್ಸ್‌ಗಾಗಿ ವಿನ್ಯಾಸಗೊಳಿಸಿದ ಬ್ಯಾಡ್ಜ್‌ಗಳನ್ನು ಧರಿಸುತ್ತಿದ್ದರು. ಜನವರಿ 1915ರಲ್ಲಿ ಗೆಜೆಟ್‌ನಲ್ಲಿ ಈ ವಿಭಾಗಕ್ಕೆ ಘನವಾದ ಮತ್ತು ಆಕರ್ಷಕವಾದ ಹೆಸರನ್ನು ಸೂಚಿಸುವಂತೆ ಪ್ರಕಟಣೆ ನೀಡಲಾಯಿತು.

ಜೇನುಗಳು, ಗಗನ ಚುಂಬಿಗಳು, ಮೊಗ್ಗುಗಳು, BATANS ಮುಂತಾದ ಹೆಸರುಗಳನ್ನು ಸಾರ್ವಜನಿಕರು ಸೂಚಿಸಿದರು. ಆದರೆ ಸ್ಕೌಟಿಂಗ್ ಸಂಸ್ಥಾಪಕರಾದ ಲಾರ್ಡ್ ಸ್ಟೀಫನ್ ಸನ್ ಸ್ಮಿತ್ ಬೇಡನ್ ಪಾವೆಲ್ಲರು ಜಾಣ್ಮೆಯಿಂದ "ಬ್ರೌನೀಸ್" ಎಂದು ಸೂಚಿಸಿದರು. ರೋಸ್ ಬಡ್ಸ್‌ಗಳು ತಕ್ಷಣವೇ ಈ ಹೆಸರನ್ನು ಸ್ವೀಕರಿಸಿದರು. ಬ್ರೌನಿ ಆಂಗ್ಲ ಜಾನಪದ ಕಥೆಗಳಲ್ಲಿ ಬರುವ ದೇವತೆಗಳು. ಇವರುಗಳು ಸ್ನೇಹಮಯಿ ಚಿಕ್ಕಗುಂಪು. ಮನೆಯವರು ಏಳುವ ಮುನ್ನ ಅವರನ್ನು ಕೇಳದೆ ಪ್ರವೇಶಿಸಿ ಗುಟ್ಟಾಗಿ ಮನೆಕೆಲಸಗಳನ್ನು ಮಾಡಿ ಹೊರಟು ಬಿಡುವರು. ಬ್ರೌನಿ ಪರಿಕಲ್ಪನೆ ಗುಲಾಬಿ ಮೊಗ್ಗುಗಳಿಗೆ (Rose Buds) ಹೆಚ್ಚು ಸೂಕ್ತವೆನ್ನಿಸಿತು. ಈಗಲೂ ಈ ಹೆಸರು ಮುಂದುವರಿದಿದೆ. ಸ್ನೇಹಮಯಿಗಳಾಗಿ ಯಾವಾಗಲೂ ಸಹಾಯ ಮಾಡಲು ಸಿದ್ಧವಾಗಿರುವ, ಸಂತಸವಾಗಿರುವ ಜನರಿಗದು ಒಳ್ಳೆಯ ಹೆಸರು.

ಕೆಲವು ಮಕ್ಕಳಿಂದ ಪ್ರಾರಂಭವಾದ ಬ್ರೌನಿ ಹಲವು ಸಾವಿರವಾಯಿತು. ವಿದೇಶಗಳಿಗೂ ಪರಿಚಯವಾಯಿತು. ಅನೇಕ ದೇಶಗಳು ಈ ವಿನೋದದಲ್ಲಿ ಭಾಗಿಯಾದರು. ಅವರೆಲ್ಲರೂ ತಮ್ಮನ್ನು ಬ್ರೌನೀಸ್ ಎಂದು ಕರೆದುಕೊಳ್ಳದೆ ತಮ್ಮ ತಮ್ಮ ದೇಶದ ಹೆಮ್ಮೆ ಪ್ರೀತಿಯ ಪಕ್ಷಿಗಳ ಹೆಸರನ್ನು ಇಟ್ಟುಕೊಂಡರು. ಗ್ರೀಕರು "ಪೌಲ" ಅಂದರೆ ಪುಟ್ಟಹಕ್ಕಿಗಳೆಂದು, ಸ್ವಾಜಿಲ್ಯಾಂಡಿನವರು "ಬ್ಲುಗೇ ಸ್ವಾಜಿ" ಎಂದು (ಇದು ರಾಜಪಕ್ಷಿ ಇದನ್ನು ರಾಜತ್ವದ ಸಂಕೇತವಾಗಿ ರಾಜನ ಕಿರೀಟದ ಮೇಲೆ ಹಾಗೂ ರಾಷ್ಟ್ರಧ್ವಜದಲ್ಲಿ ಬಳಸಲಾಗುವುದು), ಸ್ವಿಟ್ಜರ್‌ಲ್ಯಾಂಡ್‌ನವರು "ಪೆಟಿಟೀಸ್" ಎಂದರು (ಸದಾ ರೆಕ್ಕೆ ಬಡಿಯುವ ಜೇನುನೊಣಗಳ ರೆಕ್ಕೆ ಎಂದು ಕರೆದರು), ಚಟುವಟಿಕೆಯಿಂದ ಕೂಡಿರುವ ಇಟಲಿಯವರು "ಕೊಕಿನೇಲಿ" ಹೆಣ್ಣುಪಕ್ಷಿ ಎಂದು, ಪಾಕಿಸ್ತಾನದವರು ಬ್ಲೂ ಬರ್ಡ್ಸ್ ನೀಲಿಹಕ್ಕಿ ಎಂದು ಇಂಡಿಯಾದವರು ಬುಲ್‌ಬುಲ್ ಪಕ್ಷಿ ಎಂದು ಕರೆದರು. ಸ್ನೇಹಮಯವಾದ, ಆಕರ್ಷಕವಾದ ಒಟ್ಟಾಗಿ ಗುಂಪಿನಲ್ಲಿರುವ ಪುಟ್ಟ ಪಕ್ಷಿಗಳ ಹೆಸರನ್ನು ಪುಟ್ಟ ಮಕ್ಕಳ ಗುಂಪಿಗೆ ಇಡಲಾಯಿತು.

ಬುಲ್‌ಬುಲ್‌ಗಳು ದೊಡ್ಡವರಿಗೆ ಸಹಾಯ ಮಾಡುವ ಪುಟಾಣಿಗಳು. ಇತರರಿಗೆ ಸಹಾಯ ಮಾಡುವುದು ಮತ್ತು ಸಂತೋಷ ನೀಡುವುದು ಬುಲ್‌ಬುಲ್‌ಗಳ ಉದ್ದೇಶ. ವಿಶ್ವದಾದ್ಯಂತ ಈ ಪುಟಾಣಿಗಳ ಹೆಸರು ಯಾವುದಾದರೂ ಸರಿ, ಸಮವಸ್ತ್ರ ಬೇರೆ ಬೇರೆಯಾದರೂ ಉದ್ದೇಶ ಒಂದೆ. ಅವರು ವಿಶ್ವಸ್ನೇಹಿಗಳಾಗಿರುತ್ತಾರೆ. ಕಾರಣ ಇವರು "ಒಂದೇ ಪ್ರತಿಜ್ಞೆಯನ್ನು" ಮಾಡಿರುತ್ತಾರೆ. ಡಿಸೆಂಬರ್ 1915ರಲ್ಲಿ ಬ್ರೌನೀಗಳ (10 ವರ್ಷದ ಮಕ್ಕಳು) ಸಂವಿಧಾನವನ್ನು ರಚಿಸಿ ಲಂಡನ್ ಗೆಜೆಟ್‌ನಲ್ಲಿ ಪ್ರಕಟಿಸಲಾಯಿತು. 5 ರಿಂದ 8 ಮಕ್ಕಳ ಷಟ್ಕ (Six) ಎಂದು 2 ಅಥವಾ 3 ಷಟ್ಕವನ್ನು ಹಿಂಡು (ಫ್ಲಾಕ್) ಎಂದು ಅದರ ನಾಯಕಿಯನ್ನು ಫ್ಲಾಕ್ ಲೀಡರ್ ಎಂದು ಕರೆಯಲಾಯಿತು.

ಸಮವಸ್ತ್ರದ ಬಣ್ಣ ಕಂದು (Brown). ಇದರ ಜೊತೆ ನೀಲಿ ಬಣ್ಣವನ್ನು ಮಾನ್ಯ ಮಾಡಲಾಗಿತ್ತು. ಲೋಹದ ಪದಕ ಅದರಲ್ಲಿ ಒಂದು ಕಾಳಿನಾಕಾರ (acorn) ಅದರ ಮೇಲೆ BA ಅಕ್ಷರವಿತ್ತು. ಎರಡನೇ ಹಂತದ ಬ್ರೌನೀಸ್‌ಗಳು ಲೀನ್ ಸೇರಿಸಿಕೊಳ್ಳುವರು ಮುಂದುವರಿದ ನಂತರ ಫಸ್ಟ್‌ಕ್ಲಾಸ್ ಎಂದು ಸೇರಿಸುವರು. ಜೂಲಿಯಾನ ಹೊರೇಷಿಯಾ ಈವಿಂಗ್ಸ್ ಅವರ "ಟಾಮಿ ಮತ್ತು ಟೆಡ್ಡಿ" ಕಥೆಯನ್ನು ಬ್ರೌನಿ ಪಠ್ಯಾವಳಿಯಲ್ಲಿ ಸೇರಿಸಿದರು. ಮಧ್ಯ "ಜಾಣ ಕಂದು

ಕೆಂಪು ಗೂಬೆ" ಕಥೆಯನ್ನು (Wix brown owl) ಸೇರಿಸಲಾಯಿತು. ಈ ಕಥೆ ಬ್ರೌನಿಯನ್ನು ಅಭಿವೃದ್ಧಿಗೊಳಿಸಲು ಮತ್ತು ಬೆಳೆಸಲು ಸಹಾಯಕವಾಯಿತು.

1915ರ ಕೊನೆಯಲ್ಲಿ ದಳನಾಯಕಿ (Flock Leader) ಹೆಸರನ್ನು ಬ್ರೌನಿ ಔಲ್ ಎಂದು ಬದಲಾಯಿಸಲಾಯಿತು. ಬ್ರೌನಿಗಳು ಗೈಡ್‌ಗಳ ಪುಟಾಣಿ ಪ್ರತೀಕವಾದರು (Minature Guides). ಒಂದು ಹಿಂಡಿನಲ್ಲಿ 30ರಿಂದ 40 ಬ್ರೌನಿಗಳಿದ್ದರು. ಕೆಲವೊಮ್ಮೆ 10 ವರ್ಷದ ಸಂಖ್ಯೆ ತೊಂಬತ್ತು ಇರುತ್ತಿತ್ತು. 1918ರಲ್ಲಿ ಬ್ರೌನಿ ನಾಯಕಿಯರಿಗೆ ಸನ್ನದ್ದು (Warrant) ನೀಡಲು ನಿರ್ಧರಿಸಲಾಯಿತು.

ಗೈಡ್ ಕಮೀಷನರ್‌ಗಳಿಗೆ ಬ್ರೌನಿಹಿಂಡಿನ ಮಾರ್ಗದರ್ಶನದ ಜವಾಬ್ದಾರಿ ವಹಿಸಲಾಯಿತು.

1920ರಲ್ಲಿ ಶ್ರೀಮತಿ ಬ್ರೂಸಿ, ಬ್ರೌನಿ ವಿಭಾಗದ ಮೊದಲ ನಾಯಕಿಯಾದರು. ಕೆಲವೇ ತಿಂಗಳಲ್ಲಿ ಇವರನ್ನು ಬದಲಾಯಿಸಿ ಶ್ರೀಮತಿ ರೇಚಲ್ ಹೀತ್‌ರನ್ನು ನೇಮಕಮಾಡಲಾಯಿತು. ಇವರು ಬ್ರೌನಿ ಕಾರ್ಯಕ್ರಮ ರೂಪಿಸುವಲ್ಲಿ ಬಹುದೊಡ್ಡ ಕೊಡುಗೆ ನೀಡಿದರು. 1922 ಬ್ರೌನಿ ಔಲ್‌ಗಳಿಗೆ ಕೇಂಬ್ರಿಡ್ಜ್‌ನಲ್ಲಿ ಮೊದಲ ಸಮಾವೇಶವನ್ನು ಆಯೋಜಿಸಲಾಯಿತು.

13ನೇ ವಿಶ್ವ ಸಮ್ಮೇಳನದಲ್ಲಿ ಅಂತರ್‌ರಾಷ್ಟ್ರ ಬ್ರೌನಿ ಪದಕಕ್ಕೆ ಬೇಡಿಕೆ ಸಲ್ಲಿಸಲಾಯಿತು. 15ನೇ ವಿಶ್ವಸಮ್ಮೇಳನದಲ್ಲಿ ಅಂತರ್‌ರಾಷ್ಟ್ರೀಯ ಬ್ರೌನಿ ಪದಕಕ್ಕೆ ಮನ್ನಣೆ ನೀಡಿದರು. ಬ್ರೌನಿ ಪ್ರತಿಜ್ಞೆ ಮಾಡಿದವರು ಈ ಪದಕವನ್ನು ಧರಿಸಬಹುದು.

1918ರಲ್ಲಿ ಬ್ರೌನಿ ಪದಕ ಭಾರತಕ್ಕೆ ಪಾದಾರ್ಪಣೆ ಮಾಡಿತು. ಮೊದಲಿಗೆ ಯುರೋಪಿಯನ್ ಮಕ್ಕಳಿಗೆ ಮಾತ್ರ ಅವಕಾಶ ನೀಡಲಾಯಿತು. ಹಲವಾರು ಸುತ್ತಿನ ಚರ್ಚೆಯ ನಂತರ ಇದನ್ನು ಭಾರತೀಯ ಮಕ್ಕಳಿಗೂ ನೀಡಲಾಯಿತು. ಪುಟಾಣಿ ಮಕ್ಕಳಿಗೆ ಗೈಡಿಂಗ್ ಬೇಕಿತ್ತು. ಬಿಪಿಯವರು ಪುಟಾಣಿಗಳಿಗೆ ಗೈಡಿಂಗ್ ನೀಡಿದರು. ಭಾರತದಲ್ಲಿ ಮೊದಲು ಬ್ಲೂ ಬರ್ಡ್ (Blue Bird) ಎಂದು ಕರೆಯಲಾಯಿತು. ನಂತರದಲ್ಲಿ ಇಂದಿನವರೆಗೂ ಬುಲ್‌ಬುಲ್‌ಗಳೆಂದೇ ಕರೆಯುತ್ತೇವೆ.



ಅಂತರ್‌ರಾಷ್ಟ್ರೀಯ ಬ್ರೌನಿ ಪದಕ

## ಬುಲ್‌ಬುಲ್

ಭಾರತ ದೇಶದ ಪೌರತ್ವ ಹೊಂದಿರುವ ಪೋಷಕರ ಮಗಳಾಗಿ ಐದು ವರ್ಷ ತುಂಬಿದ 10 ವರ್ಷ ತುಂಬದ ಬಾಲಕಿಯು ನೂತನ ಪ್ರವೇಶಿ (recruit) ಆಗಲು ಅರ್ಹಳಾಗಿರುತ್ತಾಳೆ.

## ಷಟ್ಕದ ಸಹನಾಯಕಿ / ದ್ವಿತೀಯ – Second

ಹಿಂಡಿನ ನಾಯಕಿಯು ಷಟ್ಕದ ನಾಯಕಿಯೊಂದಿಗೆ ಸಮಾಲೋಚಿಸಿ ಷಟ್ಕದ ಉಪನಾಯಕಿಯನ್ನು ನೇಮಕಮಾಡುತ್ತಾರೆ. ಇವಳು ಷಟ್ಕದ ನಾಯಕಿಗೆ ಸಹಾಯ ಮಾಡುವಳು ಮತ್ತು ಅವಳ ಅನುಪಸ್ಥಿತಿಯಲ್ಲಿ ಅವಳ ಜವಾಬ್ದಾರಿ ಯನ್ನು ವಹಿಸಿಕೊಳ್ಳುವಳು. 1.5 ಸೆಂ.ಮೀ. ಅಗಲವಿರುವ ಒಂದು ನೀಲಿ ತೋಳಪಟ್ಟಿಯನ್ನು ಎಡತೋಳಿನ ಮಡಿಕೆಯ ಮೇಲೆ 1 ಸೆಂ.ಮೀ. ಅಂತರದಲ್ಲಿ ಹೊಲಿದುಕೊಂಡಿರಬೇಕು.

## ಬುಲ್‌ಬುಲ್ ಸಭೆ (ಪಕ್ಷಿನೋಟ) – Pow wow

ಇದು ಹಿಂಡಿನ ಆಡಳಿತ ಮಂಡಳಿ, ಹಿಂಡಿನ ಎಲ್ಲಾ ಬುಲ್‌ಬುಲ್‌ಗಳು ಮತ್ತು ಹಿಂಡಿನ ನಾಯಕಿ ಮತ್ತು ಹಿಂಡಿನ ಸಹನಾಯಕಿಯರು ಇದರ ಸದಸ್ಯರಾಗಿರುತ್ತಾರೆ. ಇದು ಹಿಂಡಿನ ಎಲ್ಲ ಆಗು–ಹೋಗುಗಳನ್ನು ನೋಡಿಕೊಳ್ಳುತ್ತದೆ.



# 3. ಪ್ರವೇಶದ ಅವಶ್ಯಕತೆಗಳು
## Pravesh Requirements

1. ತಾರಾಳ ಕಥೆಯನ್ನು ಹೇಳಲು ಬರಬೇಕು.
2. ಬುಲ್‌ಬುಲ್ ಪ್ರತಿಜ್ಞೆ, ನಿಯಮ, ಗುರಿ ಮತ್ತು ಸ್ವಾಗತ, ಇವುಗಳ ಅರ್ಥವನ್ನು ತಿಳಿಯಬೇಕು.
3. ಬುಲ್ ಬುಲ್ ವಂದನೆ ಮತ್ತು ಹಸ್ತಲಾಘವವನ್ನು ಸರಿಯಾದ ರೀತಿಯಲ್ಲಿ ಮಾಡಿ ತೋರಿಸಬೇಕು.
4. ಪೋಷಕರು ಕಲಿಸಿದ ಪ್ರಾರ್ಥನೆಯನ್ನು ಪ್ರತಿದಿನ ಮಾಡಬೇಕು.
5. ಪ್ರತಿದಿನ ಮನೆಯಲ್ಲಿ ಒಂದು ಸತ್ಕಾರ್ಯ ಮಾಡಬೇಕು.
6. ಬುಲ್‌ಬುಲ್ ಪ್ರಾರ್ಥನಾ ಗೀತೆಯನ್ನು ಸರಿಯಾಗಿ ಹಾಡುವುದು.
7. ಮೇಲೆ ಹೇಳಿರುವುದನ್ನು ಕಲಿತ ನಂತರ ಹಿಂಡಿನ ದೀಕ್ಷಾ ಸಮಾರಂಭದಲ್ಲಿ ಪ್ರತಿಜ್ಞೆ ಮಾಡಿ ಹಿಂಡಿಗೆ ಸೇರ್ಪಡೆಯಾಗಬೇಕು.
8. ದೀಕ್ಷೆ ಪಡೆದ ಬುಲ್‌ಬುಲ್ ಸಮವಸ್ತ್ರ ಅದರ ಮೇಲೆ ಸದಸ್ಯತ್ವದ ಪದಕವನ್ನು ಧರಿಸಲು ಅರ್ಹಳಾಗುತ್ತಾಳೆ. ಸದಸ್ಯತ್ವದ ಪದಕವು ನೀಲಿ ಬಟ್ಟೆಯ ಹಿನ್ನೆಲೆಯಲ್ಲಿ, ಹಳದಿ ಬಣ್ಣದ ವಿಶ್ವ ಸ್ಕೌಟ್ ಲಾಂಛನದ ಫ್ಲೂರಡೆಲಿಸ ಹೊಂದಿದೆ. ವಿಶ್ವ ಗೈಡ್ಸ್ ಲಾಂಛನವಾದ ತ್ರಿದಳ (Trefoil) ಇದರೊಳಗೆ ಅಳವಡಿಸಲಾಗಿದೆ. ಅಶೋಕ ಚಕ್ರವು ಇದರ ಮಧ್ಯದಲ್ಲಿರುತ್ತದೆ. ಈ ಪದಕವನ್ನು ಎಡ ತೋಳಿನ ಮಧ್ಯೆ ಧರಿಸಬೇಕು.

### ಅ] ಬುಲ್‌ಬುಲ್ ಪ್ರತಿಜ್ಞೆ

ನಾನು ನನ್ನ ಕೈಲಾದ ಮಟ್ಟಿಗೆ ದೇವರಿಗೂ, ದೇಶಕ್ಕೂ ಕರ್ತವ್ಯವನ್ನು ಸಲ್ಲಿಸುತ್ತೇನೆಂದೂ, ಬುಲ್‌ಬುಲ್ ನಿಯಮವನ್ನು ಪಾಲಿಸುತ್ತೇನೆಂದೂ ಪ್ರತಿದಿನವೂ ಒಂದು ಒಳ್ಳೆ ಕೆಲಸವನ್ನು ಮಾಡುತ್ತೇನೆಂದೂ ಪ್ರತಿಜ್ಞೆ ಮಾಡುತ್ತೇನೆ.

### ಆ] ನಿಯಮ

1) ಬುಲ್‌ಬುಲ್ ಹಿರಿಯರಿಗೆ ವಿಧೇಯಳು – Bulbul is obedient

2 ಬುಲ್‌ಬುಲ್ ವಿನಯವಂತಳು ಮತ್ತು ನಿರ್ಮಲಳು – Bulbul is clean & Polite

ಇ] ಧ್ಯೇಯ: ಸಾಧ್ಯವಾದಷ್ಟು ಸಹಾಯ ಮಾಡುವುದು – DO YOUR BEST

ಈ] ವಂದನೆ

ವಂದಿಸುವಾಗ ಬಲ ಅಂಗೈಯ ಮಧ್ಯ ಎರಡು ಬೆರಳುಗಳನ್ನು ನೇರಮಾಡಿ ಕಿರುಬೆರಳನ್ನು ಅದರ ಪಕ್ಕದ ಬೆರಳನ್ನು ಹೆಬ್ಬೆರಳಿಂದ ಒತ್ತಿ ಹಿಡಿದು ಕೈಯನ್ನು ಮೇಲಕ್ಕೆ ಎತ್ತಿ ಎರಡು ಬೆರಳುಗಳು ಬಲ ಹುಬ್ಬನ್ನು ಸ್ಪರ್ಶಿಸುವಂತೆ ಇಟ್ಟು ವಂದಿಸಿ, ನಂತರ ಕೈಯನ್ನು ಚುರುಕಾಗಿ ಕೆಳಗೆ ಬಿಡಬೇಕು.

ಉ] ಬುಲ್‌ಬುಲ್ ಪ್ರಾರ್ಥನೆ :

**ಹಮ್ ಹೈ ಛೋಟೆ ಛೋಟೆ ಬಾಲ್,**
**ಹಮಾರಿ ಲೇನಾ ತೂ ಸಂಭಾಲ್,**
**ಕದಂ ಕದಂ ಪರ ಕರೆ ಗಲತಿಯಾ,**
**ಸದಬುದ ದೇನಾ ಬುಲಾ ಗಲತಿಯಾ,**
**ತುಮ ಬಿನ ಕೌನ ಲೇಗಾ ಸಂಭಾಲ್. ॥ಹಮ್॥**

ಇದನ್ನು ಹಿಂಡಿನೊಡನೆ ಜೊತೆಗೂಡಿ ಹಾಡಲು ಅಭ್ಯಾಸ ಮಾಡಬೇಕು.



# 4. ಬುಲ್ ಬುಲ್ಸ್ ಸಮವಸ್ತ್ರ
## Uniform for Bul Buls

(ಅ) ಪಾರದರ್ಶಕವಾಗಿಲ್ಲದ ಹಾಗೂ ಸಾದಾ ಕಡು ಆಕಾಶನೀಲಿ ಬಟ್ಟೆಯಿಂದ ಮೇಲಂಗಿಯನ್ನು (Overall Frock) ಹೊಲಿಸಬೇಕು. ಇದಕ್ಕೆ ಮೇಲ್ಮುಚ್ಚಿಕೆ ಇರುವ ಎರಡು ಮೇಲು-ಜೋಬು ಪಾರ್ಶ್ವದಲ್ಲಿ ಎರಡು ಜುಬ್ಬದ ಜೇಬಿನಂತೆ ಇರಬೇಕು ಮತ್ತು ತೋಳು ಮೊಣಕೈ ಮೇಲೆ 8 ಸೆಂ. ಮೀ. ಇದ್ದು ಅದರ ಅಂಚನ್ನು 4 ಸೆಂ. ಮೀ. ಮೇಲಕ್ಕೆ ಮಡಿಚಿ ಹೊಲಿಯಬೇಕು. ತೆರೆದ ಕ್ರೀಡಾ ಕೊರಳ ಪಟ್ಟಿ (Open Sports Collar) ಹಾಗೂ ಎರಡು ಭುಜಪಟ್ಟಿ ಇರಬೇಕು. ಈ ಮೇಲಂಗಿಯು ಸಡಿಲವಾಗಿರಬೇಕು. ಮೊಂಡಿಯಿಂದ 4 ಅಂಗುಲ ಕೆಳಗೆ ಇರಬೇಕು.

**(ಆ) ನಡುಪಟ್ಟಿ–Belt :** ರಾಷ್ಟ್ರ ಕಛೇರಿಯವರು ಒದಗಿಸಿದ ಕಂದು ಬಣ್ಣದ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಅಧಿಕೃತ ಲಾಂಛನವುಳ್ಳ ನೈಲಾನ್ ನಡುಪಟ್ಟಿಯನ್ನು ಧರಿಸಬೇಕು.

**(ಇ) ಕಂಠವಸ್ತ್ರ –Scarf:** ಹಸಿರು, ನೇರಳೆ ಮತ್ತು ಹಳದಿ ಬಣ್ಣ ಹೊರತು ಪಡಿಸಿ ನಿಮ್ಮ ಆಯ್ಕೆಯ ಬಣ್ಣದ ಸ್ಥಳೀಯ ಅಥವಾ ಜಿಲ್ಲಾ ಸಂಸ್ಥೆ ಅನುಮೋದಿಸಿದ ಬಣ್ಣದ ಕಂಠವಸ್ತ್ರವನ್ನು ಧರಿಸಬೇಕು. ಇದನ್ನು ಭುಜ ಪಟ್ಟಿಗಳ ಮೇಲೆ ಕೊರಳನ್ನು ಸುತ್ತಿ ಮುಂದಕ್ಕೆ ತಂದು ಕವುಂಗರದ ಮೂಲಕ ಹಾಯಿಸಿ ಅಂದಗೊಳಿಸಬೇಕು.

**(ಈ) ಕಾಲು ಚೀಲ :** ಬಿಳಿಯ ಬಣ್ಣದ ಕಾಲು ಚೀಲ ಧರಿಸಬೇಕು.

**(ಉ) ಪಾದರಕ್ಷೆ :** ಕಪ್ಪು ಬಣ್ಣದ ಚರ್ಮದ ಬೂಟ್ಸ್ ಅಥವಾ Canvas ಷೂ ಅನ್ನು ಧರಿಸಬೇಕು.

**(ಊ) ಕೇಶಾಲಂಕಾರ :** ನೀಲಿ ಸಾದಾ ರಿಬ್ಬನ್ ಧರಿಸಬೇಕು ಅಥವಾ ಚಿತ್ತಾರಗಳು ಇಲ್ಲದ ನೀಲಿ ತಲೆಪಟ್ಟಿಯನ್ನು (hair band) ಉಪಯೋಗಿಸಬಹುದು.

**(ಋ) ಸದಸ್ಯತ್ವದ ಪದಕ– Membership Badge:** ನೀಲಿ ಬಣ್ಣದ ಹಿನ್ನೆಲೆಯಲ್ಲಿ, ಹಳದಿ ಬಣ್ಣದ ಭಾರತ ಸ್ಕೌಟ್, ಗೈಡ್ ಲಾಂಛನವಿರುತ್ತದೆ. ಇದನ್ನು ಎಡತೋಳಿನ ಮಧ್ಯೆ ಧರಿಸಬೇಕು.

**(ಎ) ಭುಜ ಪದಕ -Shoulder Badge:** ಈ ಪದಕದ ಉದ್ದ 6 ಸೆಂ. ಮೀ. ನಿಂದ 8 ಸೆಂ. ಮೀ. ಇದ್ದು. 1.5 ಸೆಂ. ಮೀ. ಅಗಲವಾಗಿರುತ್ತದೆ. ಇದು ಬಿಳಿಯ ಬಟ್ಟೆಯದಾಗಿದ್ದು ಇದರ ಮೇಲೆ ಕೆಂಪು ಬಣ್ಣದಿಂದ ಗುಂಪಿನ ಸಂಖ್ಯೆ ಮತ್ತು ಹೆಸರು ಬರೆದಿರುತ್ತದೆ. ಇದನ್ನು ಬಲ ತೋಳಿನ ಭುಜಪಟ್ಟಿಯ ಕೆಳಗೆ ಹೊಲಿಯಬೇಕು.

**(ಏ) ಷಟ್ಕದ ಲಾಂಛನ :** ಪ್ರತಿಯೊಬ್ಬ ಬುಲ್‌ಬುಲ್ ಷಟ್ಕದ ಲಾಂಛನವನ್ನು ಧರಿಸಬೆಕು. ಲಾಂಛನದ ಸುತ್ತಳತೆ 4. ಸೆಂ. ಮೀ. ಕಪ್ಪು ಬಟ್ಟೆಯ ಹಿನ್ನೆಲೆಯಲ್ಲಿ ಲಾಂಛನದ ಕಸೂತಿ ಮಾಡಿ ತೆಳುವಾದ ನೀಲಿ ಬಣ್ಣದ ಅಂಚನ್ನು ಹೊಲಿಯಬೇಕು. ಇದನ್ನು ಎಡ ಜೋಬಿನ ಮೇಲ್ಭಾಗದಲ್ಲಿ ಧರಿಸಬೇಕು.

**(ಐ) ಉಣ್ಣೆಯ ಮೇಲಂಗಿ (ಸ್ವೆಟರ್) :** ಚಿತ್ತಾರಗಳು ಇಲ್ಲದೆ ಇರುವ ಸಾದಾ ಕಪ್ಪು ಬಣ್ಣದ ಉಣ್ಣೆಯ ಮೇಲಂಗಿಯನ್ನು ಧರಿಸಬೇಕು. ಕಾಲಮಾನಕ್ಕೆ ತಕ್ಕಂತೆ ಅರೆತೋಳಿನ ಉಣ್ಣೆ ಮೇಲಂಗಿ ಧರಿಸಬಹುದು.

**ಐಚ್ಚಿಕ ವಸ್ತು**

(ಅ) ವಿನೋದ ವಿಹಾರಕ್ಕೆ ಹೊರಟಾಗ ನೀಲಿ ಜೀನ್ಸ್ ಪ್ಯಾಂಟ್ ರಾಷ್ಟ್ರ ಕಛೇರಿ ಸರಬರಾಜು ಮಾಡಿದ 'ಟಿ' ಷರ್ಟ್ ಮತ್ತು "ಪಿ" ಟೋಪಿಯನ್ನು ಧರಿಸಬಹುದು.

**ವಿಶ್ವ ಬ್ರೌನಿ ಪದಕ**

(ಆ) ಸಮವಸ್ತ್ರದ ಎಡಜೇಬಿನ ಮುಚ್ಚಿಕೆಯ ಮೇಲೆ ಧರಿಸಬೇಕು.

**ಲೋಹದ ಪದಕ**

(ಇ) ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಲೋಹದ ಪದಕವನ್ನು ನಿತ್ಯದ ಉಡುಪಿನ ಮೇಲೆ ಧರಿಸಬಹುದು.

**ಆಭರಣಗಳು**

ಧಾರ್ಮಿಕ ಅಥವಾ ಸಾಂಪ್ರದಾಯಿಕ ಆಭರಣಗಳನ್ನಲ್ಲದೆ, ಇತರೆ ಆಭರಣಗಳನ್ನು ಧರಿಸಬಾರದು.

## ಬುಲ್‌ಬುಲ್‌ಗಳ ಪ್ರಗತಿಶೀಲ ಯೋಜನೆ–Advancement of Bul Bul

1) ಬುಲ್ ಬುಲ್ ದಳಕ್ಕೆ ಸೇರಬಹುದು. ವಯಸ್ಸು ಐದು ವರ್ಷವಾಗಿರಬೇಕು.

2) ಬುಲ್‌ಬುಲ್, ಕೊನೆಯ ಪಕ್ಷ 3 ತಿಂಗಳು ಪ್ರವೇಶ ಹಂತದಲ್ಲಿ ಕೆಲಸ ಮಾಡಿದ ನಂತರ ಕೋಮಲ ಪಂಖ ಪಡೆಯಲು ಅರ್ಹಳಾಗುತ್ತಾಳೆ.

3) ಕೋಮಲ ಪಂಖ ಬುಲ್ ಬುಲ್, ಕೊನೆಯ ಪಕ್ಷ ಮೂರು (3) ತಿಂಗಳ ಕಾಲ ಕೆಲಸ ಮಾಡಿದ ಮೇಲೆ ರಜತ ಪಂಖ ಪಡೆಯಲು ಅರ್ಹಳಾಗುತ್ತಾಳೆ.

4) ರಜತ ಪಂಖ ಬುಲ್‌ಬುಲ್ ಕೊನೆಯ ಪಕ್ಷ 9 ತಿಂಗಳ ಕಾಲ ಕೆಲಸ ಮಾಡಿದ ಮೇಲೆ ಸುವರ್ಣ ಪಂಖ ಪಡೆಯಲು ಅರ್ಹಳಾಗುತ್ತಾಳೆ.

5) ಸುವರ್ಣ ಪಂಖ್ ಬುಲ್‌ಬುಲ್, ಕೊನೆಯ ಒಂಬತ್ತು ತಿಂಗಳ (9) ಕಾಲ ಕೆಲಸ ಮಾಡಿದ ಮೇಲೆ ಹೀರಖ್ ಪಂಖ ಪಡೆಯಲು ಅರ್ಹಳಾಗುತ್ತಾಳೆ.

**ಸೂಚನೆ :**

1) ಸುವರ್ಣ ಪಂಖ ಪಡೆದ ಬುಲ್ ಬುಲ್ ಯಾವುದೇ ಪ್ರಾವೀಣ್ಯತಾ ಪದಕ ಅಥವಾ ಎಲ್ಲಾ ಪ್ರಾವೀಣ್ಯತಾ ಪದಕಗಳನ್ನು ಪಡೆಯಬಹುದು.

2) ಪ್ರವೇಶ ಮತ್ತು ಕೋಮಲ ಪಂಖ ಪರೀಕ್ಷೆಗಳನ್ನು ಹಿಂಡಿನ ನಾಯಕಿ ಪರೀಕ್ಷೆ ಮಾಡುತ್ತಾರೆ.

3) ರಜತ್ ಪಂಖದಿಂದ ಮುಂದಕ್ಕೆ ಎಲ್ಲಾ ಪ್ರಾವೀಣ್ಯತಾ ಪದಕಗಳಿಗೆ, ಜಿಲ್ಲಾಪರೀಕ್ಷಕ ಮಂಡಳಿಯ ಸದಸ್ಯರು ಪರೀಕ್ಷೆ ನಡೆಸುತ್ತಾರೆ.



# 5. ಬುಲ್‌ಬುಲ್ ಹಿಂಡನ್ನು (Flock) ಪ್ರಾರಂಭಿಸುವುದು ಹೇಗೆ?

## How to start a Flock

ಬುಲ್‌ಬುಲ್ ಹಿಂಡಿನಲ್ಲಿ 5ರಿಂದ 10 ವರ್ಷದ ಹೆಣ್ಣುಮಕ್ಕಳಿರುತ್ತಾರೆ. ಕನಿಷ್ಠ 12, ಗರಿಷ್ಠ 24. ಇದರ ಜವಾಬ್ದಾರಿಯನ್ನು ಒಬ್ಬರು/ಇಬ್ಬರು ಹಿರಿಯ ನಾಯಕಿಯರು ನಿರ್ವಹಿಸಬೇಕೆಂದು ಶಿಫಾರಸ್ಸು ಮಾಡಲಾಗಿದೆ. ಹಿಂಡು ಪ್ರಾಯೋಜಿತವಾಗಿರಬಹುದು ಅಥವಾ ಮುಕ್ತ (Open) ಹಿಂಡಾಗಿರಬಹುದು. ಶಾಲೆಯ ಮೂಲಕ ನೋಂದಣಿಯಾಗಿರುವ ಹಿಂಡು ಪ್ರಾಯೋಜಿತ (Sponsered) ಹಿಂಡು. ಸ್ವತಂತ್ರವಾಗಿ ನಡೆಯುವ ಹಿಂಡು ಯಾವ ಶಾಲೆಯವರಾದರೂ ಇದಕ್ಕೆ ಸೇರಬಹುದಾದ ಹಿಂಡು ಮುಕ್ತ ಹಿಂಡು.

ಮುಕ್ತ ಹಿಂಡು ಇವರು ಸಾರ್ವಜನಿಕ ಸ್ಥಳಗಳಲ್ಲಿ, ಉದ್ಯಾನಗಳಲ್ಲಿ ಸೇರಿ ಕಾರ್ಯಕ್ರಮ ನಡೆಸುವರು. ಶಾಲೆಯ ನಂತರ ಅಥವಾ ರಜಾದಿನಗಳಲ್ಲಿ ನಡೆಸುವರು. ಇದು ಸ್ವಯಂ ಸೇವಾ ಕಾರ್ಯಕ್ರಮ. ಯಾವ ಹಿರಿಯರಿಗೆ ಮಕ್ಕಳ ಬೆಳವಣಿಗೆ ಮತ್ತು ಅಭಿವೃದ್ಧಿಯಲ್ಲಿ ಆಸಕ್ತಿ ಇದೆಯೋ ಅವರೆಲ್ಲರೂ ಈ ಕಾರ್ಯಕ್ರಮದಲ್ಲಿ ತಮ್ಮನ್ನು ತಮ್ಮ ಮಕ್ಕಳನ್ನು ತೊಡಗಿಸಿಕೊಳ್ಳಬಹುದು.

ಒಂದು ಬುಲ್‌ಬುಲ್ ಹಿಂಡು ಒಂದು ಗುಂಪಿನ ಸದಸ್ಯತ್ವವನ್ನು ಹೊಂದಿರುತ್ತದೆ. ಈ ಗುಂಪಿನಲ್ಲಿ ಗೈಡ್‌ದಳ ಮತ್ತು ರೇಂಜರ್ ತಂಡಗಳು ಇರುತ್ತವೆ. ಯಾರೂ ಇಲ್ಲದಿದ್ದರೆ ಈ ಹಿಂಡನ್ನೇ ಒಂದು ಗುಂಪು (Group) ಎಂದು ಪರಿಗಣಿಸಲಾಗುವುದು. ಪ್ರತಿ ಹಿಂಡಿಗೂ ಪಕ್ಷಿಯ ಹೆಸರು ಇಡಲಾಗುವುದು. ಗುಂಪಿನ ಸದಸ್ಯರಾಗಿದ್ದರೆ ಅದರ ಹೆಸರನ್ನು ಹೊಂದಿರುವರು. ಪ್ರತಿ ಗುಂಪಿಗೆ ಸ್ಥಳೀಯ ಸಂಸ್ಥೆ, ಜಿಲ್ಲೆ ಅಥವಾ ರಾಜ್ಯದ ಕ್ರಮಸಂಖ್ಯೆ (Charter Number) ನೀಡಲಾಗುವುದು.

ಹಿಂಡನ್ನು ನೋಂದಾಯಿಸುವ ಮುನ್ನ ಹಿರಿಯ ನಾಯಕಿ ಮೂಲ ತರಬೇತಿಯನ್ನು ಪಡೆದಿರಬೇಕು. ನಂತರ ಮುಖ್ಯ ಶಿಕ್ಷಕರಿಗೆ/ಪ್ರಾಂಶುಪಾಲರಿಗೆ ತರಬೇತಿಯ ವರದಿ ನೀಡಿ ಹಿಂಡನ್ನು ತೆರೆಯಲು ಅನುಮತಿ ಕೋರಬೇಕು. ನಂತರ ಮಕ್ಕಳಿಗೆ ಸುತ್ತೋಲೆ ಕಳಿಸಬೇಕು. ಇಚ್ಛೆ ಇರುವ ಮಕ್ಕಳಿಗೆ ಚಳವಳಿಯ ಹಾಗೂ ಬುಲ್‌ಬುಲ್‌ನ ಉದ್ದೇಶ ಉಪಯೋಗ ಕಾರ್ಯಕ್ರಮಗಳ ಕಿರುಪರಿಚಯವನ್ನು ನೀಡಬೇಕು. ಆಯ್ಕೆ ಮಾಡಿದ ಹುಡುಗಿಯರಿಂದ ತಂದೆ/ತಾಯಿ ಒಪ್ಪಿಗೆ ಪತ್ರ ತರಿಸಿ

ಕಡತದಲ್ಲಿ ಜೋಪಾನವಾಗಿಡಬೇಕು. ಚುರುಕಾದ ಹುಡುಗಿಯನ್ನು ಷಟ್ಕ ನಾಯಕಿಯಾಗಿ ಆರಿಸಿದರೆ ನಿಮ್ಮ ಹಿಂಡಿನ ಅಭಿವೃದ್ಧಿಗೆ ಸಹಾಯಕವಾಗುತ್ತದೆ.

ತಂದೆ-ತಾಯಿಯರನ್ನು/ ಪೋಷಕರನ್ನು ಸಭೆಗೆ ಆಹ್ವಾನಿಸಿ ಚಳವಳಿಯ ಪರಿಚಯಮಾಡಿ, ಉದ್ದೇಶ ತಿಳಿಸಿ, ಅವರ ಸಹಕಾರ ಕೋರಿ, ಇಷ್ಟೆಲ್ಲಾ ಪೂರ್ವಭಾವಿ ಕಾರ್ಯಕ್ರಮ ಮಾಡಿದ ನಂತರ ಜಿಲ್ಲಾ ಆಯುಕ್ತೆ ಗೈಡ್ ಅವರನ್ನು ಸಂಪರ್ಕಿಸಿ ಅನುಮತಿ ಪಡೆಯಿರಿ. ಇವರ ಅನುಮತಿ ಇಲ್ಲದೆ ಹಿಂಡನ್ನು ತೆರೆಯಲು ಸಾಧ್ಯವಿಲ್ಲ. ಇವರಿಗೆ ಮಕ್ಕಳ ಸಂಖ್ಯೆ, ಪ್ರಾರಂಭಿಸುವ ದಿನ, ಸಭೆ ನಡೆಯುವ ದಿನ, ಸ್ಥಳ, ಶಾಲಾ ವಿಳಾಸ ಇತ್ಯಾದಿ ಮಾಹಿತಿ ನೀಡಿ. ಈ ಮಾಹಿತಿ ಅವರಿಗೆ ನಿಮ್ಮ ಸಭೆಗೆ ಭೇಟಿ ನೀಡಲು ಸಹಾಯಕವಾಗುತ್ತದೆ.

ಹಿಂಡಿನ ಸದಸ್ಯತ್ವ ಶುಲ್ಕ ಸ್ಥಳೀಯ/ಜಿಲ್ಲಾ ಸಂಸ್ಥೆಗೆ ತುಂಬಬೇಕು. ಪ್ರತಿವರ್ಷ ಜೂನ್ ತಿಂಗಳ ಒಳಗೆ ಶುಲ್ಕ ಪಾವತಿ ಮಾಡಿ ನವೀಕರಿಸಿಕೊಳ್ಳಬೇಕು. ರಾಜ್ಯ ಸಂಸ್ಥೆ ನೀಡುವ ನಿಮ್ಮ ಸನ್ನದು ಸಂಖ್ಯೆ (Warrant No.) ಹಾಗು ಹಿಂಡಿನ ಸಂಖ್ಯೆಯನ್ನು (Charte No.) ಜೋಪಾನವಾಗಿಡಬೇಕು. ನಿಮ್ಮ ತರಬೇತಿ ಪ್ರಮಾಣಪತ್ರ ಮುಂದಿನ ತರಬೇತಿಗೆ ಮುಖ್ಯ. ಇದನ್ನು ಜೋಪಾನವಾಗಿಡಬೇಕು. ದಾಖಲಾತಿ, (Records) ಹಾಜರಾತಿ, ಪ್ರತಿ ಬುಲ್‌ಬುಲ್‌ಳ ಪ್ರಗತಿ, ಆವಕಜಾವಕತಖ್ತೆ, ಹಣಕಾಸಿನ ಲೆಕ್ಕಾಚಾರ ಪುಸ್ತಕ, ಸಂದರ್ಶಕರ ಪುಸ್ತಕ, ಕಾರ್ಯಕ್ರಮ ವಿವರ, ಛಾಯಾಚಿತ್ರ ಪುಸ್ತಕ ಇತ್ಯಾದಿಗಳನ್ನು ಕ್ರಮವಾಗಿಡಿ.

- ಹಕ್ಕಿಗಳ ಸಭೆಯನ್ನು (ಪೌವ್‌ಅವ್) ಅಂದರೆ ಬುಲ್‌ಬುಲ್‌ಗಳ ಸಭೆಯನ್ನು ಆದಷ್ಟು ಬಾರಿ ಮಾಡಿ.
- ಬುಲ್‌ಬುಲ್‌ಗಳ ತರಗತಿಯನ್ನು (Flock Meeting) ವಾರಕ್ಕೆ ಒಂದು ಬಾರಿ ಮಾಡಬೇಕು.
- ಈ ಹಿಂಡಿಗೆ ಬೇಕಾದ ಸುರಕ್ಷಿತ ಸಲಕರಣೆಗಳನ್ನು ಸಂಗ್ರಹಿಸಿ.
- ಸಭೆಯನ್ನು ಕ್ರಮವಾಗಿ ಗೊತ್ತುಪಡಿಸಿದ ದಿನ ಮತ್ತು ಸಮಯಕ್ಕೆ ಸರಿಯಾಗಿ ನಡೆಸಿ.
- ಆಕರ್ಷಕವಾಗಿ ಸಭೆ ಪ್ರಾರಂಭಿಸಿ ಮುಂದಿನ ಸಭೆಗೆ ಆಸಕ್ತಿಪೂರ್ಣವಾಗಿ ಓಡೋಡಿ ಬರುವಂತೆ ಮುಕ್ತಾಯಗೊಳಿಸಿ.
- ಮಕ್ಕಳನ್ನು ತೀರ ಮಗುವಿನಂತೆ ಕಾಣಬೇಡಿ. ವಯಸ್ಸಿಗೆ ತಕ್ಕಂತೆ ಕಾರ್ಯಕ್ರಮಗಳನ್ನು ನೀಡಿ.

- ಪೋಷಕರ, ಶಾಲಾ ಮುಖ್ಯ ಶಿಕ್ಷಕ, ಶಿಕ್ಷಕ ವರ್ಗದವರ ಹಾಗು ಸಾರ್ವಜನಿಕರ, ಸಹಕಾರ ಪಡೆಯಿರಿ. ಅವರೊಡನೆ ಉತ್ತಮ ಸಂಬಂಧ ಕಾಪಾಡಿಕೊಳ್ಳಬೇಕು. ಗುಂಪು ಇದ್ದರೆ ಅದರ ಸಮಿತಿಯ ಸಹಕಾರ ಪಡೆಯಿರಿ. ಈ ಎಲ್ಲಾ ಸಹಕಾರಗಳಿಂದ ನಿಮ್ಮ ಹಿಂಡು ನಿರಂತರ ಪ್ರಗತಿಯನ್ನು ಸಾಧಿಸಲು ಸಹಾಯವಾಗುತ್ತದೆ.



# 6. ಹಿಂಡಿನ ಸಭೆ (Flock Meeting)

ಕೆಲವು ಹಳತು ಮತ್ತೆ ಕೆಲವು ಹೊಸತು
ಕೆಲವು ಕಲ್ಪನೆ ಮತ್ತೆ ಕೆಲವು ಸತ್ಯ
ಹೇಳಲೊಂದ ಹಾಡು, ಕೇಳಲೊಂದು ಕಥೆ
ಮಕ್ಕಳನ್ನು ಸಂತೋಷ ಪಡಿಸಲು ಮತ್ತು ಒಳಿತಾಗಿ ಬೆಳೆಸಲು.

ಹಿಂಡಿನ ಸಭೆಗೆ ಉದ್ದೇಶ ಗೊತ್ತುಪಡಿಸಿಕೊಳ್ಳಿ. ಉದ್ದೇಶದ ಆಧಾರದ ಮೇಲೆ ಯೋಜನೆ ಸಿದ್ಧಪಡಿಸಿ, ಇದರಿಂದ ತರಬೇತಿ ಪ್ರಕ್ರಿಯೆ ಕ್ರಮಬದ್ಧವಾಗಿ ನಡೆಸಬಹುದು. ಕಾರ್ಯಕ್ರಮದಲ್ಲಿ ವಿನೋದ, ಸಾಹಸ, ಆಟ, ಆಕರ್ಷಣೆ ಇರಬೇಕು. ಇದರಿಂದ ಅವರಲ್ಲಿ ಬುಲ್‌ಬುಲ್‌ಗಳಾಗಿ ಮುಂದುವರಿಯುವ ಆಸಕ್ತಿಯನ್ನು ನಿರಂತರವಾಗಿ ಮೂಡಿಸಬೇಕು.

ಹಿಂಡಿನ ನಾಯಕಿ ಕಾರ್ಯಕ್ರಮ ಯೋಜನೆಯಲ್ಲಿ ಮೌಲ್ಯಗಳು ಮತ್ತು ಸ್ವಂತಿಕೆಯನ್ನು (Originality) ಅಳವಡಿಸಬೇಕು. ಇದರಿಂದ ಬುಲ್‌ಬುಲ್‌ಗಳ ಆಸಕ್ತಿ, ಅವಶ್ಯಕತೆಗಳನ್ನು ಪೂರೈಸಲು ಸಾಧ್ಯವಾಗುತ್ತದೆ. ಪ್ರತಿಕಾರ್ಯಕ್ರಮವೂ ಪೂರ್ವಕಾರ್ಯಕ್ರಮದೊಡನೆ ಸಂಬಂಧ ಹೊಂದಿದ್ದು ಮುಂದುವರಿಯಬೇಕು.

ನಿಮ್ಮ ಕಾರ್ಯಕ್ರಮ ಪುಸ್ತಕದಲ್ಲಿ ದಾಖಲಿಸಿ ನಿಮ್ಮ ಕಾರ್ಯಕ್ರಮ ಚಾರಿತ್ರ್ಯ ಮತ್ತು ಬುದ್ಧಿಶಕ್ತಿ, ಆರೋಗ್ಯ, ಕರಕೌಶಲ ಮತ್ತು ಸೇವೆಗಳು ಎಂಬ ನಾಲ್ಕು ಆಧಾರಾಂಶಗಳನ್ನು (Four Sign Post) ಅವಲಂಬಿಸಿರುತ್ತವೆ.

- ಯೋಜನೆ, ಚಟುವಟಿಕೆಗಳನ್ನು ಮಾಡಲು ಅವಕಾಶ ನೀಡಿ.
- ಹಿಂಡಿನ ಸಭೆ ಸಮಯಕ್ಕೆ ಸರಿಯಾಗಿ ಪ್ರಾರಂಭಿಸಬೇಕು ಮತ್ತು ಸಮಯಕ್ಕೆ ಸರಿಯಾಗಿ ಮುಕ್ತಾಯಗೊಳಿಸಬೇಕು.
- ಆಟದ ವಿಧಾನದಲ್ಲಿ ಸಮವಸ್ತ್ರ, ಕೇಶ, ಉಗುರುಗಳ ಪರಿವೀಕ್ಷಣೆ ಮಾಡಬೇಕು.
- ಸಹಾಯಕ ನಾಯಕಿ ಇದ್ದರೆ ಅವರ ಜೊತೆ ಮುಂಚಿತವಾಗಿ ಯೋಜನೆ ಸಿದ್ಧಗೊಳಿಸಬೇಕು.
- ಧ್ವನಿ ಮೃದುವಾಗಿರಬೇಕು. ಆದರೆ ದೃಢವಾಗಿರಬೇಕು.
- ಕಾರ್ಯಕ್ರಮ ನಿರಂತರವಾಗಿ ಮುಂದುವರಿಯಬೇಕು.
- ಕಾರ್ಯಕ್ರಮ ಅವಶ್ಯಕತೆ ಇದ್ದಲ್ಲಿ ಬದಲಾಗುವಂತಿರಬೇಕು.

- ಸಭೆಯಲ್ಲಿ ಪರ್ಯಾಯ ಕಾರ್ಯಕ್ರಮ ಮಾಡಲು ಸಿದ್ಧವಾಗಿರಬೇಕು.
- ಚಟುವಟಿಕೆಯಲ್ಲಿ ವೈವಿಧ್ಯತೆ ಇರಲಿ. ಅವಶ್ಯಕತೆ ಇದ್ದರೆ ಸಂಪನ್ಮೂಲ ವ್ಯಕ್ತಿಗಳ ಸಹಾಯ ಪಡೆಯಿರಿ.
- ಸಭೆಗೆ ನಿರ್ದಿಷ್ಟ ಹಾಗೂ ಚೊಕ್ಕವಾದ ಪ್ರಾರಂಭ ಮತ್ತು ಮುಕ್ತಾಯ ಇರಬೇಕು.
- ಸಭೆ ಒಂದು ಘಂಟೆ ನಡೆಸಬೇಕು.
- ಭಾಷೆ ಹಾಗೂ ಬಳಸುವ ಸಲಕರಣೆಗಳು ಸರಳವಾಗಿರಲಿ.
- ಆಟವನ್ನು ಸ್ವಲ್ಪ ಸಮಯ ಆಡಿಸಿ, ಪ್ರತಿ ಸಭೆಯಲ್ಲೂ ಆಟ ಆಡಿಸಿ.

ನಾಯಕಿಯ ಮಾತುಗಳು ಬಹುಮುಖ್ಯ. ಮಕ್ಕಳಿಗೆ ಮನದಟ್ಟಾಗುವಂತೆ (ಮನಮುಟ್ಟುವಂತೆ) ಇರಬೇಕು. ನಾಯಕಿ (ಹಿಂಡಿನ ಶಿಕ್ಷಕಿ) ಬುಲ್‌ಬುಲ್ ಮಕ್ಕಳ ವಯಸ್ಸಿಗೆ ತಕ್ಕಂತೆ ಚಟುವಟಿಕೆಗಳನ್ನು ನಡೆಸಬೇಕು. ಪುನರಾವರ್ತನೆಯಲ್ಲಿ ಸಾಕಷ್ಟು ವೈವಿಧ್ಯತೆ ಇರಬೇಕು. ಇವರಿಗೆ ಸಾಹಸದ ಸವಿಯನ್ನು ಸರಳವಾಗಿ, ಸುರಕ್ಷಿತವಾಗಿ ನೀಡಬೇಕು.

- ನೀವು ಕಲಿಸುವ ವಿಷಯದ ಬಗ್ಗೆ ನಿಮಗೆ ಸ್ಪಷ್ಟತೆ ಹಾಗು ಪ್ರಭುತ್ವ ಇರಬೇಕು.
- ಮಕ್ಕಳು ಕೇಳಬಹುದಾದ ಪ್ರಶ್ನೆಗಳಿಗೆ ಉತ್ತರಿಸಲು ಸಿದ್ಧರಾಗಿರಬೇಕು.



## 7. ಬುಲ್‌ಬುಲ್ ಮರಿಗಳು ಮತ್ತು ವೃಕ್ಷದ ಕಥೆ




**1. ಎಲೆ ಮತ್ತು ಮರಿಗಳು**




**2. ಹೂವು ಮತ್ತು ಮರಿಗಳು**




3. ಪಣ್ಣು ಮತ್ತು ಮರಿಗಳು




4. ತಂದೆ ತಾಯಿ ಪಕ್ಷಿ ಮತ್ತು ಮರಿಗಳು

ಬುಲ್‌ಬುಲ್ ಹಕ್ಕಿ ತನ್ನದೇ ಆದ ಬಡ ಗೂಡನ್ನು ಮರದ ಕವಲಿನಲ್ಲಿ ಕಟ್ಟಿತು. ಇದರಲ್ಲಿ ಮೊಟ್ಟೆ ಇಟ್ಟಿತು. ಈ ಮೊಟ್ಟೆಗಳು ಮರಿಯಾದವು. ಪುಟ್ಟಮರಿಗಳು ಗೂಡನ್ನು ತುಂಬಿದವು. ಇವುಗಳ ತಂದೆತಾಯಿಯರು ಇವುಗಳ ಆಹಾರದ ಹುಡುಕಾಟದಲ್ಲಿ ತೊಡಗಿದರು. ಹೀಗಾಗಿ ಯಾವಾಗಲೂ ಮರಿಗಳು ತಮ್ಮ ಪಾಡಿಗೆ ತಾವು ಇರುತ್ತಿದ್ದವು.

ಮೊದಮೊದಲು ಇವುಗಳು ಪುಟ್ಟ ರೋಮಗಳ ಉಂಡೆಯಾಗಿದ್ದವು. ಕ್ರಮೇಣ ಪುಕ್ಕಗಳು ಬೆಳೆದವು. ತಮ್ಮ ಕಣ್ಣು ಬಾಯಿ ಸದಾ ತೆರೆದುಕೊಂಡು ಗೂಡಿನಿಂದ ತಲೆ ಹೊರಗೆ ಚಾಚಿರುತ್ತಿದ್ದವು. ಮರದ ದೊಡ್ಡ ಎಲೆಗಳು ಗೂಡನ್ನು ಮರೆಮಾಡಿದ್ದವು. ಮರಿಗಳಿಗೆ ಯಾವಾಗಲೂ ಈ ವಿಶಾಲ ಎಲೆಗಳು ಮಾತ್ರ ಕಾಣುತ್ತಿದ್ದವು. ಮರಿಗಳು "ಟುವ್ವಿ ಟುವ್ವಿ" ಎಂದು ಎಲೆಗಳೊಡನೆ ಮಾತನಾಡುತ್ತಿದ್ದವು. ಒಂದು ಎಲೆಯು ಮಂದಗತಿಯಲ್ಲಿ ಚಲಿಸುತ್ತಾ "ಓಹೊ! ನೀವು ಕಣ್ಣು ತೆರೆದಿರಿ, ನಿಮಗೇನು ಕಾಣುತ್ತಿದೆ?" ಎಂದು ಕೇಳಿದವು. ಮರಿಗಳು "ನಿಮ್ಮನ್ನು ಬಿಟ್ಟು ನಮಗೇನೂ ಕಾಣುತ್ತಿಲ್ಲ. ನಾವು ಇರುವ ಮರ ಸಹ ಕಾಣುತ್ತಿಲ್ಲ" ಎಂದವು. ಎಲೆ ಹೇಳಿತು, "ಆತುರಬೇಡ ಒಂದೊಂದಾಗಿ ನೋಡಿ ತಿಳಿಯಿರಿ. ನಿಮ್ಮ ಪುಕ್ಕ ಬೆಳೆಯುವತನಕ, ನೀವು ಹಾರುವತನಕ ನಿಮ್ಮ ಕಣ್ಣು ಬಲಿಯುವ ತನಕ, ಸರಿಯಾಗಿ ಕಾಣುವ ತನಕ ಮರವನ್ನು ಕಾಣಲಾರಿರಿ. ಬನ್ನಿ ನಿಮ್ಮ ಕಣ್ಣುಗಳನ್ನು ಪರೀಕ್ಷಿಸುತ್ತೇನೆ" ಎಂದು ಎಲೆ ಬಾಗಿತು, ದೊಡ್ಡ ಮರಿಯ ಪಾದಮುಟ್ಟಿತು, ಪುಟಾಣಿಗಳೇ ಈಗ ಹೇಳಿ ನಿಮ್ಮ ಗೂಡಿನಲ್ಲೇನಿದೆ? "ನಮ್ಮ ಗೂಡಿನಲ್ಲಿ ನಮ್ಮನ್ನು ಬಿಟ್ಟರೆ ಮತ್ತೇನೂ ಇಲ್ಲ" ಎಂದವು. ಒಂದು ಮರಿ ಹೇಳಿತು, "ನಾನು ಅಲುಗಾಡಲಾಗದಷ್ಟು ಮರಿಗಳು ನನ್ನನ್ನು ಒತ್ತುತ್ತಿವೆ".

"ತಪ್ಪು ತಪ್ಪು ಎಲ್ಲಾ ಮರಿಗಳು. ನೀನು ಬೆಳೆಯದಂತೆ ನಿನ್ನನ್ನು ಹಿಡಿದಿಟ್ಟಿವೆ. ನಿನಗಿನ್ನೂ ಕಣ್ಣು ಕಾಣಿಸುತ್ತಿಲ್ಲ. ಉಳಿದವು ನಿನ್ನನ್ನು ಕಾಪಾಡುತ್ತಿವೆ, ನಿನ್ನ ಮನಸ್ಸನ್ನು ಒಳ್ಳೆ ಯೋಚನೆಯಲ್ಲಿ ತೊಡಗಿಸು, ತಪ್ಪಾಗಿ ಯೋಚಿಸಬೇಡ. ಮರಿಗಳ ಸಹಾಯಕ್ಕೆ ವಂದಿಸು. ಅಲ್ಲದೇ ಜೀವನದಲ್ಲಿ ಪರಸ್ಪರರನ್ನು ಕಾಪಾಡುವುದು ಧರ್ಮ. ನಿನ್ನ ಜೊತೆಗಾರರ ಸಹಾಯವನ್ನು ಮನಗಾಣು. ನಿನ್ನ ಪುಕ್ಕಗಳೂ ತಾನಾಗಿಯೆ ದಿನಕಳೆದಂತೆ ಬೆಳೆಯುತ್ತವೆ. ನೀನು ನಿನ್ನನ್ನು ನಿನ್ನ ಜೊತೆಗಾರರನ್ನು ಬೆಚ್ಚಗೆ ಸುರಕ್ಷಿತವಾಗಿಡಲು ಪ್ರಯತ್ನಿಸು" ಎಂದಿತು ಎಲೆ.

ಅರೆ ಮನಸ್ಸಿನಿಂದ ಬುಲ್‌ಬುಲ್ "ಆಗ್ಲಿ, ಆಗ್ಲಿ" ಎಂದಿತು. ಎದುರುತ್ತರ ಕೊಡಲಿಲ್ಲ, ಗೊಣಗಾಡಿತು ಗೊಣಗಾಡುವುದರಿಂದ ಪ್ರಯೋಜನವಿಲ್ಲ ಎಂಬ ಅರಿವು ಅದಕ್ಕಿನ್ನೂ ಮೂಡಿರಲಿಲ್ಲ.

ಕೊಕ್ಕನ್ನು ಮುಚ್ಚುತ್ತಾ ತೆಗೆಯುತ್ತಾ, ಚಲಿಸುತ್ತಾ ಪುಟ್ಟಮರಿ ಎಲೆಯ ಮೇಲೆ ಬಂದು ಕುಳಿತಿತು. ಎಲೆಯು "ನೀನು ನನ್ನನ್ನು ದಿಟ್ಟಿಸುತ್ತಲೇ ಇದ್ದಿಯಾ, ನನ್ನಲ್ಲಿ ನೀನು ಏನನ್ನು ಕಂಡೆ?" ಎಂದು ಕೇಳಿತು. "ನೀನು ಕೇವಲ ದೊಡ್ಡ ಹಸಿರು ಮುಚ್ಚಿಕೆ. ನೀನು ಅಡ್ಡವಾಗಿಲ್ಲದೇ ಇದ್ದರೆ!" ಎಂದು ಮೆಲುದನಿಯಲ್ಲಿ ಉತ್ತರಿಸಿತು.

"ಅಯ್ಯೋ ನಿನಗೆ ಪುಕ್ಕಗಳಿಲ್ಲವೆ! ನೀನು ಪುಕ್ಕಗಳನ್ನು, ಒಳ್ಳೆಯ ಮನಸ್ಸನ್ನು ಬೆಳೆಸಿಕೊಳ್ಳದೆ ಇದಕ್ಕಿಂತ ಉತ್ತಮವಾದುದನ್ನು ನೋಡಲಾರೆ. ಮರ ನಿಮ್ಮನ್ನು ರಕ್ಷಿಸುವ ಕಾರ್ಯ ನನಗೆ ವಹಿಸಿದೆ. ನಾನು ನಿರ್ವಹಿಸುತ್ತಿದ್ದೇನೆ. ತಾಳು ನಿನಗೆ ಈ ವಿಚಾರ ಮನಗಾಣಿಸುತ್ತೇನೆ" ಎನ್ನುತ್ತಾ ಎಲೆ ಪಕ್ಕಕ್ಕೆ ಸರಿಯಿತು. ಸೂರ್ಯನ ಕಿರಣ ನೇರವಾಗಿ ಮರಿಗಳ ಮೇಲೆ ಬಿದ್ದಿತು. ಮರಿಗಳೆಲ್ಲಾ ಅಯ್ಯೋ! ಅಯ್ಯೋ! ಬಿಸಿ! ಬಿಸಿ! ಎಂದು ಕೂಗಲಾರಂಭಿಸಿದವು.

"ನೋಡಿದಿರಾ ಹೇಗಾಯಿತು ಹ್ಹಾ! ಹ್ಹ ಹಾ! ನಾನು ನಿಮಗೆ ಅಡ್ಡವೆನ್ನುತ್ತಿದ್ದಿರಿ! ನೋಡಿ ಹೇಗೆ ನಿಮ್ಮನ್ನು ನಾನು ಸೂರ್ಯನಿಂದ ರಕ್ಷಿಸುತ್ತಿದ್ದೇನೆ" ಎಂದಿತು. ಮಳೆಯಿಂದ ನೀರು ತುಂಬಿ ನಿಮ್ಮ ಗೂಡು ಸ್ನಾನದ ತೊಟ್ಟಿಯಾಗದಂತೆ ಕಾಪಾಡುತ್ತೇನೆ. ನಾನಿಲ್ಲದಿದ್ದರೆ! ಯೋಚಿಸಿ!" ಎಂದು ಎಲೆ ಹೇಳಿತು. ಪುಟ್ಟಮರಿಗಳು ತಮ್ಮ ಮೂರ್ಖತನಕ್ಕೆ ನಾಚಿ, ಪೆಚ್ಚಾಗಿ ಏನನ್ನು ಹೇಳದೆ ಮೌನಿಗಳಾದವು.

ಎಲೆಯು "ನಾನು ಗಾಳಿ ಬೀಸುತ್ತಾ ನಿಮ್ಮನ್ನು ತಂಪಾಗಿಡುತ್ತೇನೆ. ಹಸಿದ ಪಕ್ಷಿಗಳಿಗೆ ಆಹಾರವಾಗದಂತೆ ನಿಮ್ಮನ್ನು ಮರೆ ಮಾಡುತ್ತೇನೆ. ಪ್ರಖರ ಬಿಸಿಲಿನಿಂದ ನಿಮ್ಮ ಎಳೆಯಕಣ್ಣುಗಳನ್ನು ರಕ್ಷಿಸುತ್ತೇನೆ. ನಿಮ್ಮ ತಲೆಕಾಯುವ ಸೂರು ನಾನಾಗಿದ್ದೇನೆ. ನೀನು, ನಿನ್ನ ಗೂಡು, ನಿನ್ನ ಜೊತೆ ಮರಿಗಳು, ನಿನ್ನ ತಂದೆ ಪಕ್ಷಿ, ತಾಯಿ ಪಕ್ಷಿ, ನಾನು ಮತ್ತು ಮರವೂ ಸೇರಿದಂತೆ ನಿನ್ನ ಮನೆಯಾಗುತ್ತದೆ. ಮನೆ ನಿನಗೆ ಎಲ್ಲವನ್ನೂ ಕೊಡುತ್ತದೆ. ಇದಕ್ಕೆ ಬದಲಾಗಿ ನಾನೇನು ಕೊಡಬೇಕೆಂದು ಯೋಚಿಸು, ನಿನಗೆ ನಾವು ಮಾಡುತ್ತಿರುವ ಉಪಕಾರವನ್ನು ತಿಳಿ. ಎಲ್ಲರ ಒಳಿತಿಗಾಗಿ ಯೋಚಿಸು. ಎಲ್ಲರಿಗೂ ಸಹಾಯ ಮಾಡು. ಸದಾ ನಿನ್ನ ಬಗ್ಗೆ ಯೋಚಿಸುತ್ತಾ ಸ್ವಾರ್ಥಿಯಾಗಬೇಡ. ಆಗ ನೀನು ಚೆನ್ನಾಗಿ ಬೆಳೆಯುತ್ತಿ ಎಂದಿತು. ನಿನ್ನ "ಜೀವನ ವೃಕ್ಷದಲ್ಲಿ" ನಾನು, ದೊಡ್ಡ ಮರ, ಗೂಡು ಇದೆ. ಮರ ವಿಶ್ವವೆಂಬ ದೊಡ್ಡ ತೋಟದಲ್ಲಿದೆ. ವಿಶ್ವವು ದೇವರ ಪ್ರೀತಿಯ ಮಡಿಲಿನಲ್ಲಿದೆ" ಎಂದಿತು ಎಲೆ.

ಇಷ್ಟೊಂದು ಮಾತನಾಡಿದ ಎಲೆ ಒಂದು ಕ್ಷಣ ತಡೆದು ಉಸಿರೆಳೆದು ಕೊಂಡಿತು. ಎಲ್ಲಾ ಮರಿಗಳು ಕೇಳುತ್ತಾ ಒಟ್ಟಾಗಿ ರೋಮಾಂಚನ ಗೊಂಡವು, ಆಶ್ಚರ್ಯಚಕಿತವಾದವು, ಆನಂದಿಸಿದವು. ಈಗ ವಿಶ್ವವನ್ನು ನೋಡುವ ದೃಷ್ಟಿ ಬದಲಾಯಿಸಲಾರಂಭಿಸಿದವು. ಎಲ್ಲರೂ ಎಲ್ಲವೂ ಎಲ್ಲರಿಗೂ ಬೇಕೆಂದು ತಿಳಿದವು.

ಮರಿಗಳು ತಮ್ಮನ್ನು ತಾವು ನೋಡಿಕೊಂಡಾಗ ಪುಕ್ಕ ಬೆಳೆಯು ಲಾರಂಭಿಸಿದ್ದವು. ಅವುಗಳಿಗೆ ಸಂತಸವಾಯಿತು. ಪುಕ್ಕ ಎಣಿಸಲಾರಂಭಿಸಿದವು.

"ನೀಲಿಹಕ್ಕಿಗಳೇ ನಿಮ್ಮ ಪುಕ್ಕಗಳು ಹೇಗೆ ಬೆಳೆಯುತ್ತಿವೆ?" ಎಂದು ಎಲೆಯು ಕೇಳಿತು. ಪುಟ್ಟ ಮರಿಗಳು ಒಂದನ್ನೊಂದು ನೋಡಿತು. ಪುಕ್ಕಗಳು ಚೆನ್ನಾಗಿ ಹೊರಹೊಮ್ಮುತ್ತಿದ್ದವು. ಎಲ್ಲವೂ ಬಳಕುತ್ತಾ ಗೂಡಿನ ಬಾಯಿಯಲ್ಲಿ ನಿಂತು ಒಟ್ಟಾಗಿ ಹರ್ಷದಿಂದ ಅರಚಿದವು. "ಟುವ್ವಿಟುವ್ವಿ! ಟುವ್ವಿಟುವ್ವಿ! ನಮ್ಮ ಪುಕ್ಕಗಳು ಬೆಳೆದಿವೆ. ನಾವೆಲ್ಲಾ ಗೂಡಿನಿಂದ ಹೊರಬರುತ್ತಿದ್ದೇವೆ! ಗೂಡಿನಿಂದ ಹೊರಬರುತ್ತಿದ್ದೇವೆ! ನಾವೆಲ್ಲಾ ಹೊರಬರಬಹುದೇ?" "ಬನ್ನಿ ಪುಟ್ಟಮರಿಗಳೇ ಬನ್ನಿ. ನನ್ನ ಕೆಲಸ ಮುಗಿಯಿತು" ಎಂದು ಎಲೆ ಸುರುಳಿ ಸುತ್ತಿಕೊಂಡಿತು. ಈ ಮರಿಗಳು ಎಲೆ ಮುಂದೇನು ಮಾಡಬಹುದೆಂದು ಆಶ್ಚರ್ಯದಿಂದ ನೋಡುತ್ತಿತ್ತು.

## ಭಾಗ-2

ಅನಿರೀಕ್ಷಿತವಾಗಿ ಅತ್ಯಂತ ಪುಟ್ಟ ಬುಲ್‌ಬುಲ್ ಪಕ್ಷಿ ಒಂದು ಹೂವು ಬಾಗಿ ತಮ್ಮನ್ನು ನೋಡುತ್ತಿರುವುದನ್ನು ನೋಡಿತು. ಟುವ್ವಿಟುವ್ವಿ ಎಂದು ಪುಟ್ಟ ಬುಲ್‌ಬುಲ್ ಕೂಗಿತು. ಆ ದೊಡ್ಡ ಹೂವನ್ನು ನೋಡಿ ಎಲ್ಲವೂ ಗೂಡಿನಲ್ಲಿ ಮುದುಡಿಕೊಂಡವು. "ನಾನು ಹೂವು", ಹೆದರಬೇಡಿ. ನೀವೆಲ್ಲಾ ಗೂಡಿನಿಂದ ಹೊರಬರುವ ನಿರೀಕ್ಷೆಯಲ್ಲಿದ್ದೀರಿ. ನೀವು ಗೂಡಿನಿಂದ ನನ್ನನ್ನು ಗಮನಿಸಲೇ ಇಲ್ಲ. ಈಗ ನಿಮಗೆ ರೆಕ್ಕೆ ಪುಕ್ಕಗಳು ಬೆಳೆದಿವೆ. ನೀವು ಸ್ವತಂತ್ರವಾಗಿ ನಿಲ್ಲಬಲ್ಲಿರಿ. ಹೀಗೆ ನೀವು ಏನೆಲ್ಲಾ ನೋಡಬೇಕು. ಈಗ ವೃಕ್ಷವು ನಿಮಗೆ ಸಹಾಯ ಮಾಡುವ ಜವಾಬ್ದಾರಿ ನನಗೆ ನೀಡಿದೆ. ಮರಿಗಳು ಮೌನವಾಗಿ ಪಿಳಿಪಿಳಿ ನೋಡಿದವು.

ಹೂವು ಹೇಳಿತು, "ನಾನು ನಿಮಗೆ ಪ್ರಶ್ನಿಸಿದೆ. ಆದರೆ ನೀವು ಉತ್ತರಿಸಲಿಲ್ಲ". ಅವುಗಳು ಕಣ್ಣಿನ ಚಂಚಲತೆಯನ್ನು ನಿಲ್ಲಿಸಿ, ನಗಲಾರಂಭಿಸಿದವು.

ಒಂದು ಪುಟಾಣಿ ಹಕ್ಕಿಯನ್ನು ಹೂವು ಕೇಳಿತು, "ಸರಿ, ಎಲ್ಲರೂ ನಗುತ್ತಿದ್ದಾರೆ, ಪುಟಾಣಿ ನೀನೇಕೆ ನಗುತ್ತಿಲ್ಲ. ಮೂಕವಾಗಿ ನಿಂತಿದ್ದೀಯ? ನಿನಗೆ ನಗಬೇಕು ಅನ್ನಿಸುವುದಿಲ್ಲವೇ?" ಈಗ ಪುಟಾಣಿ ಬುಲ್‌ಬುಲ್ ಬಾಯಿ ತೆರೆದು

ಪಿಸುದನಿಯಲ್ಲಿ ಹೇಳಿತು, "ಹೌದು, ಹೌದು ದೊಡ್ಡ ಹೂವೆ" ಎಂದಿತು ಪುಟಾಣಿ ಮರಿ. ಎಲ್ಲವೂ ನಗು ನಿಲ್ಲಿಸಿದವು.

"ಅದು ಸರಿಯಾದ ಮಾತು" ಎಂದಿತು ದೊಡ್ಡ ಹೂವು. "ನೀವೆಲ್ಲರೂ ನಗು ನಿಲ್ಲಿಸುವುದಿಲ್ಲವೇನೋ ಎಂದುಕೊಂಡಿದ್ದೆ. ಇಷ್ಟು ಕಾಲ ಮರಿಗಳಾಗಿ ಪಿಳಿಪಿಳಿ ಕಣ್ಣು ಬಿಡುತ್ತಾ ಎಲ್ಲವನ್ನೂ ನೋಡಿದಿರಿ. ಈಗ ಬೆಳೆದಿದ್ದೀರಿ ಏನನ್ನಾದರೂ ಮಾಡಲು ಪ್ರಾರಂಭಿಸಿ" ಎಲ್ಲವೂ ಈ ಮಾತು ಕೇಳಿ ಉತ್ಸುಕರಾಗಿ ಒಬ್ಬರನ್ನು ಮತ್ತೊಬ್ಬರು ತಳ್ಳಾಡುತ್ತಾ ಕುತೂಹಲದಿಂದ ಹೆಜ್ಜೆ ಮುಂದಿಡುತ್ತಾ ಗೂಡಿನಿಂದ ಹೊರಬರುತ್ತಾ, ಬೀಳುವಂತಾಗುತ್ತಿದ್ದವು.

"ಸಾವಧಾನ! ಸಾವಧಾನ! ತಳ್ಳಬೇಡಿ, ಬೀಳಬೇಡಿ ಪುಟ್ಟ ಹಕ್ಕಿಗಳೇ" ಎಂದು ಹೂವು ಹೇಳಿತು. ಕೆಲಸ ಮಾಡುವ ಮುನ್ನ ಏನನ್ನು ಮಾಡಬೇಕೆಂಬುದನ್ನು ನಿರ್ಧರಿಸಿ. ಮರಿಗಳು ಹೇಳಿದವು "ನಾನು ಜಾಣ ಹಕ್ಕಿಯಾಗುತ್ತೇನೆ, ನಾಯಕನಾಗುತ್ತೇನೆ" ಹೂವು ಹೇಳಿತು "ಆತುರಬೇಡ. ನೀವೇನು ಮಾಡಬೇಕೆಂದು ನಾನು ಹೇಳುತ್ತೇನೆ. ಆದರೆ ನಾನು ಹೇಳಿದ್ದನ್ನೇ ಮಾಡುತ್ತೇನೆಂದು ನೀವು ಒಪ್ಪಬೇಕು. ನಿಮಗೆ "ನಾನು ಹೇಳಿದ್ದು ಇಷ್ಟವಾಗಲಿಲ್ಲ ಅನ್ನಿಸುತ್ತೆ. ಇಹಿ ಹಿ! (ನಗುತ್ತಾ) ಮಾತನಾಡಿ. ಲೂಸಿ ಮರಿ ಸರಿಯೇ" ಎಂದಿತು ಹೂವು. ಮರಿ ಲೂಸಿ "ಆಯಿತು ಒಪ್ಪಿಗೆ" ಎಂದಿತು. ಎಲ್ಲಾ ಪಕ್ಷಿಗಳೂ ಲೂಸಿ ಜೊತೆ ಧ್ವನಿಗೂಡಿಸಿದವು. ಹೂವು "ಒಳ್ಳೆಯದು! ಒಳ್ಳೆಯದು!" ಎಂದಿತು. ಒತ್ತಿ ಹೇಳಲು ಎರಡು ಬಾರಿ ಒಳ್ಳೆಯದೆಂದು ಸೇರಿಸಿತು. ಗೂಡಿನ ಅಂಚಿನ ಮೇಲೆ ನಿಂತುಕೊಳ್ಳಿ ಒಬ್ಬರ ಇನ್ನೊಬ್ಬರ ಮಧ್ಯ ಸಮ ಅಂತರವಿರಲಿ". ಹಕ್ಕಿಗಳು ಹೂವು ಹೇಳಿದಂತೆ ಮಾಡಿದವು. ಆದರೆ ಚುರುಕಾಗಿ ಮಾಡಲಿಲ್ಲ.

"ಬುಲ್‌ಬುಲ್‌ಗಳೇ ನಾನು ಒಂದು, ಎರಡು ಹೇಳಿದ ತಕ್ಷಣ ಪುಟ್ಟ ರೆಕ್ಕೆಗಳನ್ನು ಬಿಚ್ಚಿ ಬಿಚ್ಚಿ ಮುದುಡಿ." ಪುಟ್ಟ ಹಕ್ಕಿಗಳಿಗೆ ಸಂತೋಷವಾಯಿತು, ಹಕ್ಕಿಗಳು ತಾವು ಹಾರುತ್ತೇವೆಂದು ಯೋಚಿಸಿದವು. ಹೂವು ಒಂದು ಎರಡು ಹೇಳುತ್ತಾ ಹೋಯಿತು. ಮರಿಗಳು ಒಂದೆರಡು ನಿಮಿಷ ರೆಕ್ಕೆ ಬಿಚ್ಚಿ ಮಡಚಿ ಸುಸ್ತಾದವು ಮತ್ತು ನಿರಾಶೆ ಹೊಂದಿದವು. ಅವುಗಳಲ್ಲಿ ಮರಿ ಸಫೈರ್ ಮಾತ್ರ ನಗುನಗುತ್ತಾ ಕಷ್ಟಪಟ್ಟು ಹೂವು ಹೇಳಿದಂತೆ ರೆಕ್ಕೆ ಬಿಚ್ಚಿ ಮಡಚಿತ್ತು.

ಹೂ ಮಾಡಿಸುತ್ತಾ ಮಾಡಿಸುತ್ತಾ ತಕ್ಷಣ ಆಜ್ಞೆ ಕೊಡುವುದನ್ನು ನಿಲ್ಲಿಸಿತು. ರೆಕ್ಕೆಗಳು ನಿಧಾನವಾಗಿ ಮುದುಡಿದವು. ಕಣ್ಣುಗಳಲ್ಲಿ ನೀರು ಕಾಣಿಸಿಕೊಂಡಿತು. ಆದರೆ ಸಫೈರ್ ಮಾತ್ರ ರೆಕ್ಕೆ ಬಡಿಯುತ್ತಲೇ ಆಯಾಸವಾದರೂ ಮುಗುಳ್ನಗುತ್ತಿತ್ತು.

ಭೇಷ್! ಭೇಷ್! ಸಫೈರ್ ಮರಿ ನಿನ್ನ ರೆಕ್ಕೆ ಬಲಿತಿದೆ. ನಿನಗೆ ಕಷ್ಟಪಟ್ಟು ಕೆಲಸ ಮಾಡುವ ಮನಸ್ಸಿದೆ. ನಿಮ್ಮ ಆರು ಪಕ್ಷಿಗಳ ಗುಂಪಿಗೆ ಸಫೈರ್ ನಾಯಕಿ. ಇವಳು ನಿಜವಾದ ನೀಲ ಬುಲ್‌ಬುಲ್. ಪ್ರಾರಂಭದಲ್ಲೇ ಮಾಡದೆ ನಿಲ್ಲಿಸಿದ, ಮನಸ್ಸಿಲ್ಲದೆ ಕಷ್ಟಪಟ್ಟು ಮಾಡಿದ ಪುಟ್ಟಹಕ್ಕಿಗಳೇ ನಿಮಗೆ ಸಫೈರ್ ಒಳ್ಳೆಯ ಉದಾಹರಣೆಯಾಗಿದ್ದಾಳೆ. ಅವಳನ್ನು ಅನುಸರಿಸಿ. ನಾನೇನು ಮುಂದೆ ಮಾಡುವೆನೆಂದು ನೀವು ಯೋಚಿಸಬಲ್ಲಿರಾ?

ಸಫೈರ್ ನಾಚಿದಳು, ಮುಗುಳ್ನಕ್ಕಳು. ಮುಂದೆ ತಾನು ಮಾದರಿಯಾಗಿರಬೇಕು ಎಂಬುದನ್ನು ನೆನೆದು ಮುಖ ಗಂಭೀರವಾಯಿತು. ಹೂವಿನ ಹೊಗಳಿಕೆ ಅವಳ ಆಲೋಚನಾ ಶಕ್ತಿಯನ್ನು ಕ್ಷಣಕಾಲ ನಿಲ್ಲಿಸಿತು. ಹೂವು "ಇರಲಿ! ಇರಲಿ!" ಒಬ್ಬೊಬ್ಬರು ನಿನ್ನಹಾಗೆ ಒಳ್ಳೆಯವರಾಗುವರು. ಚಿಂತಿಸಬೇಡ ಎಲ್ಲರೊಡನೆ ನಗುನಗುತ್ತಾ ಕೆಲಸ ಮಾಡುವ ರೀತಿಯನ್ನು ನಾನು ಹೇಳಿಕೊಡುತ್ತೇನೆ. ನಿಮಗೆ ಗೂಡನ್ನು ಸ್ವಚ್ಛಗೊಳಿಸುವೆ.

ಗೂಡು ಕೊಳಕಾಗಿತ್ತು. ಕಸಕಡ್ಡಿ, ಆಹಾರ ಪದಾರ್ಥ, ಹಿಕ್ಕೆಗಳು ಉದುರಿ ಕೊಳಕಾಗಿತ್ತು. ಇದರಿಂದ ಎಲ್ಲರಿಗೂ ತೊಂದರೆಯಾಗಿತ್ತು. ಗೂಡನ್ನು ಬೇಗಬೇಗನೆ ಸ್ವಚ್ಛಗೊಳಿಸಲಾಯಿತು. ಹೀಗೆ ಹೂವು ಮರಿಗಳಿಗೆ ಎಲ್ಲಾ ಕೆಲಸಗಳನ್ನು ಮಾಡುವುದನ್ನು ಕಲಿಸಿತು. ತಮ್ಮ ತಮ್ಮ ಕೆಲಸ ತಾವೇ ಮಾಡಿಕೊಳ್ಳಬೇಕು. ಇನ್ನೊಬ್ಬರಿಂದ ಕೆಲಸ ಮಾಡಿಸುವ ನಿರೀಕ್ಷೆ ಇಟ್ಟುಕೊಳ್ಳಬಾರದೆಂದೂ, ಮತ್ತೊಬ್ಬರನ್ನು ಅವಲಂಬಿಸಬಾರದೆಂಬ ಅರಿವು ಮೂಡಿಸಿತು. ಒಂದು ದಿನ ಹೂವು ಗಂಭೀರವಾಗಿ ಪಕ್ಷಿಗಳನ್ನು ಸಭೆಗೆ ಆಹ್ವಾನಿಸಿತು.

"ಪುಟಾಣಿ ಬುಲ್‌ಬುಲ್‌ಗಳೇ ನಿಮ್ಮ ರೆಕ್ಕೆಪುಕ್ಕಗಳು ಬಲಿಷ್ಠವಾಗಿ ಬೆಳೆದಿವೆ. ನನಗಿಂತ ಬಹಳ ಉದ್ದ ಬೆಳೆದಿವೆ. ಎಲೆಯು ನಿಮಗೆ ನೋಡಲು, ಮಾಡಲು ಕಲಿಸಿತು" ಎಂದಿತು ಹೂವು. ವೃಕ್ಷಕ್ಕೆ ನೀವು ವೃಕ್ಷಬಿಟ್ಟು ಬಾನಲ್ಲಿ ಹಾರಾಡಬೇಕೆಂಬ ಆಸೆ ಎಂದು ಹೇಳಿ ಹೂವು ಮೌನವಾಯಿತು. ಹೂವು ಪುಟಾಣಿ ಬುಲ್‌ಬುಲ್‌ಗಳ ತಲೆಯ ಮೇಲಿರುವ ಕೊಂಬೆಯನ್ನು ತೋರಿಸುತ್ತಾ "ಮೇಲಿನ ಕೊಂಬೆಯನ್ನು ನೋಡಿ ರೆಕ್ಕೆ ಬಿಚ್ಚಿ ಒಮ್ಮೆ ಜಿಗಿದು ಹಾರಿ ನಿಮಗೆ ಹೊಸ ಅನುಭವಗಳು ಕಾದಿವೆ" ಎಂದಿತು. ಪುಟಾಣಿ ಬುಲ್‌ಬುಲ್‌ಗಳು ಹಾರಿದವು. ಸಾಕಷ್ಟು ಕಲಿತಿದ್ದವು, ಅನುಭವಗಳನ್ನು ಪಡೆದಿದ್ದವು. ಅವುಗಳಿಗೆ ಎಲೆ ಮತ್ತು ಹೂವನ್ನು ಅಗಲಲು ದುಃಖವಾಯಿತು. ಎಲೆ ಮತ್ತು ಹೂವಿಗೆ ಮುತ್ತಿಟ್ಟು ಕಣ್ಣೀರು ಹಾಕಿದವು. ಆದರೂ ಮುಗುಳ್ನಗುತ್ತಾ ಎಲೆಗೆ ಆಗ ವಂದಿಸಿರಲಿಲ್ಲವಾದ್ದರಿಂದ ಈಗ ಎಲೆ ಹೂವುಗಳಿಗೆ ವಂದಿಸಿ ಪುರ್ ಎಂದು ಹಾರಿಹೋದವು.

ಹೂವು ನೋಡಿತು ಹಾರುತ್ತಿದ್ದ ಹಕ್ಕಿಗಳ ಕಣ್ಣೀರಹನಿ ತಡೆಯಿತು. ನಂತರ ತಿರುಗಿ ಎಲ್ಲಾ ಹಕ್ಕಿಗಳನ್ನು ಏಕಕಾಲದಲ್ಲಿ ಕೈಚಾಚಿ ತಬ್ಬಿಕೊಂಡಿತು. "ಬೈ ಬೈ, ಹೋಗಿಬನ್ನಿ ದೇವರು ನಿಮ್ಮನ್ನೆಲ್ಲಾ ಆಶೀರ್ವದಿಸಲಿ" ಎಂದಿತು ಹೂವು. ಮೊದಲು ಸಫೈರ್ ಹಾರಿತು. ರೆಕ್ಕೆ ಬಿಚ್ಚಿ ಹಾರಾಡಿ, ಸುರಕ್ಷಿತವಾಗಿ ಕೊಂಬೆಯ ಮೇಲೆ ಆಸೀನವಾಯಿತು. ನಂತರ ಉಳಿದ ಹಕ್ಕಿಗಳನ್ನು ಪ್ರೋತ್ಸಾಹದಾಯಕವಾಗಿ ಕರೆಯಿತು.

ಒಂದಾದ ನಂತರ ಒಂದು ರೆಕ್ಕೆ ಬಿಚ್ಚಿ ಹಾರಿ ಬಂದು ಮತ್ತೆ ಗೂಡು ತಲುಪಿದವು. ಆದರೆ ಉದ್ದಕಾಲಿನ ಲೂಸಿ! ಪಾಪ ಹಾರಲಾರದೆ ಅರೆಮನಸ್ಸಿನಿಂದ ಹಾರಿ ಗುರಿತಪ್ಪಿ, ಕೊಂಬೆಯನ್ನು ತಲುಪದೆ, ಗೂಡನ್ನೂ ತಲುಪಲಾಗದೆ ಕಣ್ಮರೆಯಾಯಿತು. ಮತ್ತೆಂದೂ ಅದನ್ನು ಹಕ್ಕಿಗಳು ನೋಡಲೇ ಇಲ್ಲ.

## ಭಾಗ-3

"ಬನ್ನಿ! ಬನ್ನಿ! ಮರಿಗಳೆ ಎಂದು ಹಣ್ಣು ಕರೆಯಿತು. ಅದರ ಧ್ವನಿ ಮೃದುವಾಗಿತ್ತು. ನೇರವಾಗಿ ಜೇನಿನಂತೆ. ಮನಸ್ಸಿನಲ್ಲಿ ಇಳಿಯಿತು, ಹಣ್ಣು ಕೆಂಪಾಗಿತ್ತು, ದುಂಡಾಗಿತ್ತು. ಮರಿಗಳಿಗೆ ಇಷ್ಟವಾಯಿತು. ಎಷ್ಟಾದರೂ ಹಣ್ಣುಗಳು ಹೂವಿನ ಅಂತಿಮ ರೂಪವಲ್ಲವೆ?"

"ಬೆಳಗಿನಲ್ಲಿ ಮಾತ್ರ ಹಾರುತ್ತಿರುವ ಪಕ್ಷಿಗಳೇ, ನೀವು ಅಷ್ಟೇನು ಕಾರ್ಯನಿರತರಾಗಿಲ್ಲ ಅಲ್ಲವೆ?" ಎಂದು ಹಣ್ಣು ಕೇಳಿತು. ಹಕ್ಕಿಗಳು ರಭಸದಲ್ಲಿ ರೆಕ್ಕೆಗಳನ್ನು ಬಡಿದಾಗ ಈ ಕಳಿತ ಹಣ್ಣಿಗೆ ಸ್ವಲ್ಪ ಪೆಟ್ಟಾಯಿತು. ಹಕ್ಕಿಗಳು "ನಾವು ಈಗ ತಾನೆ ಇಳಿಯುತ್ತಿದ್ದೇವೆ" ಎಂದವು.

"ಹಾಗೆನ್ನುವುದು ಕೆಲಸ ಮಾಡದೇ ಇರುವುದಕ್ಕೆ ಕಾರಣವಲ್ಲ, ಕೆಲಸ ಸಾಕಷ್ಟಿದೆ" ಎಂದಿತು ಹಣ್ಣು. ಬುಲ್‌ಬುಲ್‌ಗಳು ಮೌನವಾಗಿ ಕೆಲಸ ಏನೆಂಬಂತೆ ತಲೆ ಎತ್ತಿ ಹಣ್ಣನ್ನು ನೋಡಿದವು. ಹಣ್ಣಿನ ಉತ್ತರಕ್ಕಾಗಿ ಕಾದು ನಿಂತವು ಹಾಗು ಹಣ್ಣು ನಾನಾಗಿದ್ದರೆ ಎಂದು ಪ್ರಾರಂಭಿಸಿದರೆ ಆಶ್ಚರ್ಯಪಡಬೇಕಾಗಿಲ್ಲ ಎಂದು ಮರಿಗಳು ಅಂದುಕೊಂಡವು.

ಹಾಗೆಯೆ ಹಣ್ಣು "ನಾನಾಗಿದ್ದರೆ ಎಲ್ಲೆಡೆ ಹಾರಾಡುತ್ತಿದ್ದೆ. ನಿಮ್ಮಲ್ಲಿ ಕಲ್ಪನೆಗಳ ಕೊರತೆ ಇದೆ. ನೀವು ಬೇರೆಯವರು ಹೇಳುವ ತನಕ ನೋಡುವುದಿಲ್ಲ". ಬುಲ್‌ಬುಲ್‌ಗಳು ತಲೆತಗ್ಗಿಸಿ ನೆಲ ನೋಡಿದವು. ಹೂವಿನ ತರಬೇತಿಯಿಂದ "ಇದೇನು ಮಹಾಕಷ್ಟವಲ್ಲ" ಎಂದವು ಮರಿಗಳು. ಎಲೆ ನಿಮಗೆ ನೋಡಲು

ಕಲಿಸಿತು. ಹೂವು ನಿಮಗೆ ಮಾಡಲು ಕಲಿಸಿತು, ಯಾರೂ ನಿಮಗೆ ನೀವೇ ಯೋಚಿಸಿ ಮಾಡಲು ಕಲಿಯಲಿಲ್ಲ. ಮತ್ತೊಮ್ಮೆ "ನಾನು ಹಣ್ಣು" ಎಂದು ಗಂಟಲು ಸರಿ ಮಾಡಿಕೊಂಡು ಹೇಳಿತು. "ಈಗ ನೀವು ಮನಸ್ಸಿನ ಆಳಕ್ಕೆ ಇಳಿದು ಯೋಚಿಸಬೇಕು" ಎಂದಿತು.

ಪುನಃ ಹಣ್ಣು ಹೇಳಿತು, "ನಮ್ಮ ನೆರಳಲ್ಲಿ ಮರದ ಉಪಯುಕ್ತ, ಪಶು ಪಕ್ಷಿಗಳು ಬಂದು ಮಲಗುತ್ತವೆ. ಜನರು ತಮ್ಮ ಮುಡಿಯಲ್ಲಿ ಹೂವನ್ನು ಸಿಕ್ಕಿಸಿಕೊಂಡು ಹೋಗುವರು. ಆದ್ರೆ ಯಾರೂ ನನ್ನನ್ನು ನೋಡದೇ ಹೋಗುವುದಿಲ್ಲ. ನಾನು ಹಣ್ಣಾಗುವುದನ್ನು ಎಲ್ಲರೂ ಕಾಯುತ್ತಿರುತ್ತಾರೆ. ನಾನು ಹಣ್ಣಾದಾಗ" ಸ್ವಲ್ಪ ಸಮಯ ಸುಮ್ಮನಿದ್ದು, "ನಾನು ಅಯೋಗ್ಯ, ಎಂದು ತನ್ನ ವೈಭವಯುತ ಹಣೆಬರಹ ನೆನೆಯುತ್ತಾ, ನಾನು ಮಾಗಿದರೆ ಎಲ್ಲರಿಗೂ ನನ್ನನ್ನು ಕೀಳಲು ಬಿಡುತ್ತೇನೆ. ತಿನ್ನಲು ಬಿಡುತ್ತೇನೆ".

ಹಣ್ಣಿನ ಕೆನ್ನೆ ಕೆಂಪಾಯಿತು, ನಾಚಿತು. ಧ್ವನಿ ಮಧುರವಾಗಿ ಹೊರಹೊಮ್ಮಿತು. "ಆದ್ದರಿಂದಲೇ ನಿಮ್ಮ ಬಳಿ ನನ್ನನ್ನು ಕಳುಹಿಸಿದ್ದು. ಈಗ ನೀವು ನಿಮ್ಮ ಕೆಲಸ ಮಾಡುವುದನ್ನು ಮಾತ್ರವಲ್ಲ ಇತರರಿಗೂ ಕೆಲಸ ಮಾಡಬೇಕು. ಇತರರಿಗೆ ಸಹಾಯಹಸ್ತ ನೀಡಬೇಕು. ಹೇಳಿದ್ದಕ್ಕೆಲ್ಲಾ ತಲೆಯಾಡಿಸಿದರೆ ಸಾಲದು ನೀವು ಸಹಾಯ ಮಾಡಲು ಆರಂಭಿಸಬೇಕು" ಎಂದಿತು ಹಣ್ಣು.

ಹಣ್ಣಿಗೆ ಹತ್ತಿರವಾದ ಕಿರಿಯ ಬುಲ್‌ಬುಲ್ ಬಹಳ ಚುರುಕಾಗಿದ್ದಳು, ಜಾಗೃತವಾಗಿದ್ದಳು. ಅವಳು ಹಣ್ಣಿಗೆ ಹತ್ತಿರವಾಗಿ ಬಾಗಿ "ಮಾಗಿದ ಹಣ್ಣು, ನೀನು ನಮ್ಮ ಹಿಂಡಿನ ನಾಯಕನಾಗಿರುವುದರಿಂದ, ನಿನ್ನ ನೇತೃತ್ವದಲ್ಲಿ ಸೇವೆಯನ್ನು ಆರಂಭಿಸಲು ಸಿದ್ಧರಾಗಿದ್ದೇವೆ. ನಿನ್ನಿಂದಲೇ ಆರಂಭಿಸೋಣವೆ?" ಎಂದು ಕೇಳಿ ಉತ್ತರಕ್ಕೂ ಕಾಯದೆ ಹಣ್ಣಿನ ಮುಖದ ಮೇಲೆ ಹರಿಯುತ್ತಿದ್ದ ಇರುವೆಯನ್ನು ಕುಟುಕಿ (Pecked). ಅವಳು ಇರುವೆಯನ್ನು ಬೀಳಿಸಿದ್ದೇ ಅಲ್ಲದೆ ಹಣ್ಣಿನ ಮುಖವನ್ನು ಪರಚಿದಳು.

ಹಣ್ಣು ಆಶ್ಚರ್ಯಚಕಿತವಾಗಿ "ತಾಳು, ತಾಳು, ಸ್ವಲ್ಪ ತಾಳು ನೀನು ಮಾಡಿದ್ದೇನು? ನನ್ನ ತೊಟ್ಟಿನ ಸುತ್ತಲೂ ಒಸರುತ್ತಿದ್ದ ಮೇಣವನ್ನು ತಿನ್ನಲು ನಾನೇ ಇರುವೆಯನ್ನು ಆಹ್ವಾನಿಸಿದ್ದೆ. ಅದನ್ನು ಓಡಿಸಿ ಎಂತಹ ಕೆಲಸ ಮಾಡಿದೆ. ಅಲ್ಲದೆ ನನಗೆ ಗಾಯ ಮಾಡಿದೆ. ಅದಕ್ಕೆ ನೀವು ತೋಟದಲ್ಲಿ ಹಾರುವ ಮುನ್ನ ನಿಮಗೆ ತಿಳುವಳಿಕೆ ಬರುವವರೆಗೆ ನಾನು ನಿಮಗೆ ತರಬೇತಿ ನೀಡಲಿ ಎಂದು ನಿಮ್ಮನ್ನು ನನ್ನ ಬಳಿಗೆ ಕಳುಹಿಸಲಾಗಿದೆ" ಎಂದಿತು.

ಹಣ್ಣು ಅವರನ್ನೆಲ್ಲಾ ಕೊಂಬೆಯಿಂದ ಕೊಂಬೆಗೆ ಹಾರುವಂತೆ ಮಾಡಿ ಎಲೆಗಳನ್ನು ತಿನ್ನುವ ಕಂಬಳಿಹುಳು (Caterpillar) ಓಡಿಸುವಂತೆ ಹೇಳಿತು. ಹಾಗೆ ಮಾಡಿದ ಹಕ್ಕಿಗಳು, ಸಹಾಯ ಮಾಡುವುದರಲ್ಲಿ ಆನಂದವಿದೆ ಎಂದು ಅರಿತವು.

ತಮ್ಮ ಕೊಕ್ಕಿನಿಂದ ರೆಕ್ಕೆಯಿಂದ ಪುಷ್ಪಪಾತ್ರೆಯನ್ನು ಸ್ವಚ್ಛಗೊಳಿಸಿದವು. ಹೂವಿನ ದಳಗಳನ್ನು ಹೊಳಪುಗೊಳಿಸಿದವು, ಮೊಗ್ಗುಗಳನ್ನು ತಟ್ಟಿ ಧೂಳಿಲ್ಲದಂತೆ ಮಾಡಿದವು. ಹಣ್ಣಿನ ಕೆಂಪು ಕೆನ್ನೆಯನ್ನು ಮೃದುವಾಗಿ ಒರೆಸಿದವು. ಅಡ್ಡಲಾಗಿದ್ದ ಎಲೆಯನ್ನು ಸರಿಸಿ ಬೇಕಾದ ಭಾಗಕ್ಕೆ ಸೂರ್ಯನ ಕಿರಣ ಬೀಳುವಂತೆ ಮಾಡಿದವು. ದಿನವಿಡಿ ಕಾರ್ಯನಿರತವಾಗಿದ್ದವು (ಕೆಲಸ ಮಾಡುತ್ತಿದ್ದವು). ಒಂದುದಿನ ಹಣ್ಣು (ನಾಯಕ) ಈ ಹಿಂಡನ್ನು ಕರೆಯಿತು. ನಾಯಕ ಏನು ಮಾತನಾಡುತ್ತಾನೆಂದು ಹಿಂಡಿಗೆ ತಿಳಿದಿರಲಿಲ್ಲ. ನಾಯಕ ಮಾತನಾಡಲು ಪ್ರಾರಂಭಿಸಿದ.

"ಈಗ ನಿಮ್ಮ ತರಬೇತಿ ಮುಗಿಯುತ್ತಾ ಬಂದಿದೆ. ನೀವು ಹಾರಿ ಹೋಗಬೇಕಾದ, ಸಮಯ ಸನ್ನಿಹಿತವಾಗಿದೆ. ಎಲೆಯು ಮತ್ತೊಂದು ಹಿಂಡು ತರಬೇತಿಗೆ ಕಳುಹಿಸುತ್ತಿದ್ದೇನೆ" ಎಂದು ಹೇಳಿತು. ನಾನು ಮಾಗಿರುವುದರಿಂದ ನನ್ನನ್ನು ಮನುಷ್ಯರು, ಪ್ರಾಣಿಗಳು ಕಿತ್ತು ತಿನ್ನುವುದರಿಂದ ಮತ್ತೊಂದು ಹಣ್ಣನ್ನು ಕೇಳು ಎಂದು ಹೇಳುತ್ತೇನೆ. ಇದು ಸಹಜವಲ್ಲವೆ?"

ಮಾತು ಕೇಳುತ್ತಾ ಕೇಳುತ್ತಾ ಅಯ್ಯೋ ಎಂದು ಮರಿಗಳು ಉದ್ಗರಿಸಿದ ವಾದರೂ ಹಣ್ಣನ್ನು ಅಗಲುವುದು ಅವುಗಳಿಗೇನು ಅಷ್ಟು ಬೇಸರವಾಗಿರಲಿಲ್ಲ. ಅವರುಗಳು ತೋಟ ಬಿಟ್ಟು ಹಾರಲು ಸಿದ್ಧವಾಗಿದ್ದವು. ಸೇವೆಯೇ ಜೀವನವೆಂದರಿತಿದ್ದವು. ಹಣ್ಣಿನ ಬಗ್ಗೆ ಹೇಳುವುದಾದರೆ ಅದು ದೈವ ನಿಯಾಮಕ. ವಿದಾಯ ಸೇವೆಯ ಭಾಗವಾಗಿತ್ತು! ನನಗೆ ಇನ್ನೊಂದು ಮಾತು ಹೇಳುವುದಿದೆ, "ನೀವು ಒಳ್ಳೆಯ ಪ್ರಾಮಾಣಿಕ ಬುಲ್‌ಬುಲ್‌ಗಳು. ಸೇವೆ ಮಾಡುವುದನ್ನು ಆರಂಭಿಸಿದ್ದೀರಿ. ಸೇವೆ ಪ್ರಾಮಾಣಿಕವಾಗಿರಬೇಕು. ಅದು ದೇವರ ಸೇವೆ ಎಂದು ತಿಳಿಯಬೇಕು. ಬೇರೆಯವರನ್ನು ಮೆಚ್ಚಿಸಲು ಸೇವೆ ಮಾಡಬಾರದು ನೀವು ಮಾಡುವ ಸೇವೆ ದೇವರಿಗೆ ಮಾಡುವ ಸೇವೆ ಎಂದು ತಿಳಿಯಿರಿ".

ಇದ್ದಕ್ಕಿದ್ದಂತೆ ಎಲೆಗಳನ್ನು ಸರಿಸಿ ಬಲಿಷ್ಠವಾದ ಕೈ ಹಣ್ಣನ್ನು ಕಿತ್ತಿತು. ಮರಿಗಳು ಬೇಸರಪಡುತ್ತಿದ್ದಾಗ ತಂದೆಹಕ್ಕಿ ತಾಯಿಹಕ್ಕಿ ಬಂದವು. ಎಲೆ, ಹೂವು, ಹಣ್ಣುಗಳೊಡನಿರುವಾಗ ಈ ಮರಿಗಳಿಗೆ ತಂದೆ-ತಾಯಿ ನೆನಪಿರಲಿಲ್ಲ. ಹಸಿದ ಸಮಯದಲ್ಲಿ ಮಾತ್ರ ನೆನಪಾಗುತ್ತಿದ್ದರು.

ಎಲೆಯು ಮುದುಡಿಕೊಂಡ ಸಮಯದಲ್ಲಿ, ಹೂವು ಬಾಡಿ ಗಾಳಿಯಲ್ಲಿ ತೂರಿ ಹೋದ ಸಮಯದಲ್ಲಿ, ಹಣ್ಣು ಹೊರಟು ಹೋದ ಸಮಯದಲ್ಲಿ ತಂದೆ-ತಾಯಿ ಬಂದಾಗ ಜೊತೆಯಾಗಿ ಕೊಂಬೆಯ ಮೇಲೆ ಕುಳಿತಾಗ ಅತೀವ ಆನಂದವಾಯಿತು.

ನೀವೆಲ್ಲಾ ಎಲ್ಲವನ್ನೂ ಕಲಿತಿದ್ದೀರಾ ಅಲ್ಲವೆ, ಎಂದು ತಂದೆತಾಯಿ ಪ್ರೀತಿಯಿಂದ ಕೇಳಿದರು. ಈಗ ನಿಮಗೆ ನಾವು ಹಾರಾಡುವುದನ್ನು ಹೇಳಿಕೊಡುತ್ತೇವೆ. ಆಗಬಹುದೆ? ಎಂದು ಅವಸರವಸರವಾಗಿ ಹೇಳಿದರು.

ಹಾರುವ ಕಲ್ಪನೆಯೊಡನೆ ಎಲ್ಲವನ್ನು ಮರೆತು ಆನಂದಿತರಾದರು. ತಂದೆತಾಯಿಗಳು ಸಹಾಯ ಮಾಡಿದಂತೆ ರೆಕ್ಕೆ ಬಿಚ್ಚಿಕೊಂಡವು. ಗಾಳಿ ಅವರ ದೇಹಗಳನ್ನೂ ಮೇಲೆತ್ತಿತು ಪಾದ ಕೊಂಬೆಯನ್ನು ಬಿಟ್ಟಿತು. ತಂದೆ ತಾಯಿಗಳು ಹಾರಿ ಹಿಂಡನ್ನು ಸುತ್ತುವರಿದವು. ಹಾರಿ! ಹಾರಿ! ಹಾರಿ! ಎಂದು ಹುರಿದುಂಬಿಸಿದವು. ಆಕಾಶದಲ್ಲಿ ಗಾಳಿಯನ್ನು ಆಧರಿಸಿ ಹಕ್ಕಿಗಳು ಹಾರಲಾರಂಭಿಸಿದವು. ಹೀಗೆ ಅವರು ಜೀವನ ಎಂಬ ಮರದಿಂದ ವಿಶ್ವ ಎಂಬ ತೋಟದಲ್ಲಿ ಹಾರಾಡಲಾರಂಭಿಸಿದರು. ಈ ತೋಟದಲ್ಲಿ ದೇವರು ಮರಗಳನ್ನು ನೆಟ್ಟಿದ್ದಾನೆ. ನಮ್ಮಂತಹ ಪ್ರಾಣಿ ಪಕ್ಷಿಗಳನ್ನು ಜೀವಜಂತುಗಳನ್ನು ಇಟ್ಟಿದ್ದಾನೆ. ಇದರಲ್ಲಿ ನಾವೇನು ಮಾಡಬೇಕೆಂದು ಅವನಿಗೇ ತಿಳಿದಿದೆ ಎಲ್ಲವೂ ಅವನ ಇಚ್ಛೆಯಂತೆ ಕೆಲಸ ಮಾಡಲು ಹೊರಟವು.

ಹಿಂಡಿನ ನಾಯಕಿಯರು **ಎಲೆಯಂತೆ** ಮಕ್ಕಳಿಗೆ ಎಲ್ಲವನ್ನೂ ವಿವರವಾಗಿ ನೋಡುವುದನ್ನು ಅಂದರೆ ವೀಕ್ಷಿಸುವುದನ್ನು ಮತ್ತು ಒಬ್ಬರಿಗೊಬ್ಬರು ಸಹಾಯ ಮಾಡುವುದನ್ನು ಕಲಿಸಬೇಕು, **ಹೂವಿನಂತೆ** ಮಕ್ಕಳು ಹೇಳಿದ ಮಾತು ಕೇಳುವಂತೆ ಮತ್ತು ತಮ್ಮ ಕೆಲಸವನ್ನು ತಾವೇ ಮಾಡುವುದನ್ನು ಕಲಿಸಬೇಕು. **ಹಣ್ಣಿನಂತೆ** ಮಕ್ಕಳಿಗೆ ಸ್ವತಂತ್ರವಾಗಿ ಆಲೋಚನೆ ಮಾಡಲು, ಕೆಲಸ ಮಾಡಲು, ಒಳ್ಳೆಯವರಾಗಿ ಬೆಳೆಯಲು ಮಾರ್ಗದರ್ಶನ ನೀಡಬೇಕು. ಅವರಲ್ಲಿ ಒಟ್ಟಾಗಿ ಕೆಲಸ ಮಾಡುವ, ಒಟ್ಟಾಗಿ ಇರುವ, ಸ್ನೇಹದಿಂದಿರುವ, ಹಂಚಿಕೊಳ್ಳುವ, ಸಹಾಯ ಮಾಡುವ ಮೌಲ್ಯಗಳನ್ನು ಬೆಳೆಸಿದರೆ ಒಳ್ಳೆಯವರಾಗಿ ಬೆಳೆಯುತ್ತಾರೆ, ಸ್ವತಂತ್ರವಾಗಿ ಕಲಿಯುತ್ತಾರೆ. ತಂದೆ-ತಾಯಿಯರೂ ನಿಮ್ಮ ಜೊತೆ ಕೈಗೂಡಿಸಿದರೆ, ಅವರನ್ನು ಪ್ರಗತಿಯುತ್ತ ಸಾಗಿಸುವುದು ಕಷ್ಟಕರವಾಗುವುದಿಲ್ಲ.

**(ಮೂಲ: ದಕ್ಷಿಣ ಭಾರತ ಕ್ಯಾಥೋಲಿಕ್ ಗೈಡ್ ಫೆಡರೇಷನ್ ಕೈಪಿಡಿ)**

## ಬುಲ್‌ಬುಲ್ ವೃಕ್ಷ (Bulbul Tree)

ಬುಲ್‌ಬುಲ್ ಹಿಂಡಿಗೆ ಬುಲ್‌ಬುಲ್ ವೃಕ್ಷ ಅವಿಭಾಜ್ಯ. ಮರದಿಂದ ಬೇರ್ಪಟ್ಟ ಕಡ್ಡಿ ಕೊಂಬೆ ಹಾಗು ಬಣ್ಣದ ಕಾಗದಗಳಿಂದ ಮರವನ್ನು ಮಾಡಬೇಕು. ಇದು ಸಸ್ಯನಾಶವನ್ನು ತಪ್ಪಿಸುತ್ತದೆ. ಇದರ ಎತ್ತರ ಎರಡರಿಂದ ಮೂರು ಅಡಿ ಇರಬೇಕು. ಈ ಮರ ಬುಲ್‌ಬುಲ್‌ಗಳಿಗೆ ಎಟುಕಬೇಕು. ಕಾರಣ ಈ ಮರವನ್ನು ಬುಲ್‌ಬುಲ್ ಎಡಗೈಯಿಂದ ಮುಟ್ಟಿ ಪ್ರತಿಜ್ಞೆ ಮಾಡುವಳು. ಈ ಮರದ ಸುತ್ತಳತೆ 2" ರಿಂದ 3" ಇರುವುದರಿಂದ ಸ್ಥಳಾಂತರಿಸಲು ಕಾಪಾಡಲು ಅನುಕೂಲಕರವಾಗಿರುತ್ತದೆ. ಸುಮಾರು 8 ಕೊಂಬೆಗಳಿದ್ದರೆ ಸಾಕು. ಈ ಪ್ರಮಾಣವನ್ನು 1976ರಲ್ಲಿ ನಿಜಾಮುದ್ದೀನ್ ತರಬೇತಿ ಕೇಂದ್ರ ನ್ಯೂಡೆಲ್ಲಿಯಲ್ಲಿ ನಡೆದ ಮೊದಲ ಕಬ್ ಬುಲ್‌ಬುಲ್ ಉತ್ಸವದಲ್ಲಿ ಅಂಗೀಕರಿಸಲಾಯಿತು.

ಬುಲ್‌ಬುಲ್ ವೃಕ್ಷ ಕ್ರಿಸ್‌ಮಸ್ ವೃಕ್ಷವಲ್ಲ. ಇದನ್ನು ಕೃತಕವಾಗಿ ತಯಾರಿಸಿ ಇಲ್ಲವೇ ಸಂಗ್ರಹಿಸಿದ ಪಕ್ಷಿಗಳು, ಅವುಗಳ ಗೂಡು, ಮೊಟ್ಟೆ ಮತ್ತು ಎಲೆಗಳಿಂದ ಅಲಂಕರಿಸುವುದು. ಇದೊಂದು ಪುಟಾಣಿ ಮರದಂತೆ ಕಾಣಬೇಕು. ಇದರಲ್ಲಿ ಅಥವಾ ಇದರ ಕೆಳಗೆ ಚಿತ್ರ ಕರಕುಶಲ ವಸ್ತುಗಳನ್ನು ಜೋಡಿಸಬಾರದು.

## ಬುಲ್‌ಬುಲ್ ವೃತ್ತ

### ಬುಲ್‌ಬುಲ್ ವೃತ್ತ ಮತ್ತು ಪೂರ್ವಜರಾದ ಬ್ರೌನಿ ದೇವತೆಗಳು

ಬ್ರೌನಿ ದೇವತೆಗಳು ನಡುರಾತ್ರಿಯಲ್ಲಿ ಒಂದು ವೃತ್ತ ಮಾಡಿ, ಹಾಡಿ ಕುಣಿಯುತ್ತಾ ವೃಕ್ಷದ ಸುತ್ತಾ ನಲಿಯುತ್ತಿದ್ದ ವೃತ್ತದ ಪ್ರತೀಕವಾಗಿ ಮುಂದುವರಿದಿದೆ. ಆದ್ದರಿಂದ ಹಿಂಡುಗಳೂ ನಮ್ಮ ದೇಶದಲ್ಲಿ ತಮ್ಮ ಮಧ್ಯದಲ್ಲಿ ಬುಲ್‌ಬುಲ್ ಮರವನ್ನು ರಚಿಸಿ ಇಟ್ಟುಕೊಳ್ಳುತ್ತಾರೆ. ಬೇರೆ ಬೇರೆ ದೇಶಗಳಲ್ಲಿ ಅವರಿಗೆ ಸರಿ ಹೊಂದುವ ಮರದ ಮೇಲೆ ಕೋಗಿಲೆ, ಮಾದರಿ ಕೊಳ, ಒಂದು ದೊಡ್ಡ ಬ್ರೌನಿ ಬ್ಯಾಡ್ಜ್ ಮಾಡಿ ಅದರ ಮೇಲೆ ಗೂಬೆ, ಪುಟ್ಟ ಹಕ್ಕಿ ಹೀಗೆ ತಮಗೆ ಬೇಕಾದುದನ್ನ ಇಟ್ಟುಕೊಳ್ಳುತ್ತಾರೆ. ಪ್ರತಿಯೊಂದು ದೇಶದವರೂ ತಮ್ಮದೇ ಆದ ಹಾಡನ್ನು ನಾಯಕಿಯೊಡನೆ ವೃತ್ತದಲ್ಲಿ ನಿಂತು ಹಾಡುತ್ತಾರೆ. ಪ್ರತಿ ದೇಶದ ಹಿಂಡು ತನ್ನದೇ ಆದ ಬುಲ್‌ಬುಲ್ ವೃತ್ತ ಗೀತೆ ಹೊಂದಿರುತ್ತದೆ. ಈ ಹಾಡು ಸಾಧಾರಣವಾಗಿ ಬುಲ್‌ಬುಲ್ ಸಭೆಯ ಆರಂಭ. ಭಾರತದಲ್ಲಿ ಬುಲ್‌ಬುಲ್‌ಗಳು ಕೈಕೈ ಸೇರಿಸಿ ನಾಯಕಿಯ ಜೊತೆ ಬುಲ್‌ಬುಲ್ ಮರದ ಸುತ್ತ ವೃತ್ತ ಮಾಡುತ್ತಾರೆ. ಕೈಕೈ ಹಿಡಿದು ಕೊಳ್ಳುವುದರಿಂದ ಧೈರ್ಯದಿಂದ ಹೊಸ ಮತ್ತು ಅಪರಿಚಿತ ಚಟುವಟಿಕೆಗಳಲ್ಲಿ

ಭಾಗವಹಿಸಲು ಸಿದ್ಧರಾಗುತ್ತಾರೆ. ಷಟ್ಕ ಸಭೆಯ ಪ್ರಾರಂಭದಲ್ಲಿ ಹಾಜರಿ ತೆಗೆದುಕೊಳ್ಳುವ ಪರಿವೀಕ್ಷಣೆ ಮಾಡುವ ಪದ್ಧತಿ ಇದೆ. ಇದರಿಂದ ಪ್ರತಿ ಬುಲ್‌ಬುಲ್‌ಗಳ ಶಿಸ್ತು ಮತ್ತು ಸ್ವಚ್ಛತೆ ಅಚ್ಚುಕಟ್ಟುತನವನ್ನು ಗಮನಿಸಲಾಗುವುದು. ಇದಲ್ಲದೆ ಇವುಗಳನ್ನು ಗಮನಿಸಲು ಆಟಗಳಿವೆ. ಪ್ರಾವೀಣ್ಯತಾ ಪದಕಕ್ಕೆ ಬೇಕಾದ ಆಟಗಳನ್ನು ಆಡಿಸಲಾಗುವುದು ಅತಿಥಿಗಳ ಸ್ವಾಗತ, ಪದಕ ಪ್ರದಾನ ಸಮಾರಂಭ, ಮೇಲಕ್ಕೆ ಹಾರುವ/ವಿದಾಯ ಸಮಾರಂಭ, ಸಮಾರೋಪ ಮುಂತಾದ ಸಮಾರಂಭಗಳಿವೆ.

**ಬುಲ್‌ಬುಲ್ ವೃತ್ತದ ಲಕ್ಷಣಗಳು**

- ಸ್ವಯಂ ಶಿಸ್ತು
- ಅನೌಪಚಾರಿಕ ಶಿಕ್ಷಣ
- ಚಾರಿತ್ಯಾಭಿವೃದ್ಧಿ
- ನಾಯಕತ್ವ

**ಸ್ವಯಂ ಶಿಸ್ತು**

ಆಟದ ಮೂಲಕ, ಪದಕ ಕಾರ್ಯ, ಹೊರಾಂಗಣ ಚಟುವಟಿಕೆ ಮೂಲಕ ವಿಧೇಯತೆ ನಿಯಮ ಪರಿಪಾಲನೆಗಳಿಂದ ಸ್ವಯಂ ಶಿಸ್ತನ್ನು ಕಲಿಸಲಾಗುವುದು.

**ಅನೌಪಚಾರಿಕ ಶಿಕ್ಷಣ**

ಹಿಂಡಿನ ಸಭೆಯಲ್ಲಿ ವಿಚಾರ ವಿನಿಮಯ ಮಾಡುವ, ಚರ್ಚೆ ಮಾಡುವ ಅಭಿಪ್ರಾಯ ಹೇಳುವ ಅವಕಾಶವಿರುತ್ತದೆ. ಅವರು ವೃತ್ತದಲ್ಲಿ ಕುಳಿತು ಒಬ್ಬರನ್ನೊಬ್ಬರು ನೋಡುತ್ತಾ ಮಾತನಾಡುವರು. ಅವರು ತರುವ ಸುದ್ದಿಗಳು ವೈವಿಧ್ಯಮಯವಾಗಿ ಆಸಕ್ತಿ ಪೂರ್ಣವಾಗಿರುತ್ತದೆ. ಇವುಗಳ ವ್ಯಾಪ್ತಿ ವಿಶಾಲವಾದುದು. ಈ ಸುದ್ದಿಗಳನ್ನು ಹೇಳಲು ಅವಕಾಶ ನೀಡುವುದು. ಆಟದ ಮೂಲಕ ಚಟುವಟಿಕೆಗಳನ್ನು ಮಾಡಿಸುವುದು. ಇದರಿಂದ ಕಲಿಕೆ ವೇಗವಾಗಿರುತ್ತದೆ. ಕಲಿತದ್ದನ್ನು ದೀರ್ಘಕಾಲ ಜ್ಞಾಪಕದಲ್ಲಿಟ್ಟುಕೊಳ್ಳುವರು. ಈ ವಿಧಾನ ಯಾವುದೇ ವೈಯಕ್ತಿಕ ಬೋಧನೆಗಿಂತ ಫಲಪ್ರದವಾಗಿರುವುದು. ಇದರಿಂದ ಮಾತನಾಡುವ ಧೈರ್ಯ ಬೆಳೆಯುತ್ತದೆ. ನಾಯಕತ್ವ ಬೆಳೆಯುತ್ತದೆ.

## ಚಾರಿತ್ರ್ಯಾಭಿವೃದ್ಧಿ

ಚಾರಿತ್ರ್ಯಾಭಿವೃದ್ಧಿಯನ್ನು ಹೃದಯ, ತಲೆ ಮತ್ತು ಮನಸ್ಸನ್ನು ಕಾಯ, ವಾಚಾ, ಮನಸಾ ಸಮನ್ವಯಗೊಳಿಸುವ ಮೂಲಕ ಸಾಧಿಸಬಹುದು. ಬುಲ್‌ಬುಲ್‌ಗಳು ತಲೆಯನ್ನು ಜಾಣತನದಿಂದ, ಕೈಯನ್ನು ಸೃಜನ ಶೀಲತೆಯಿಂದ ಮತ್ತು ಹೃದಯವನ್ನು ವಿಶಾಲತೆಯಿಂದ ಬಳಸುವುದನ್ನು ಕಲಿಯುವಳು, ಎಂತಹ ಕಠಿಣತೆಯನ್ನು ಎದುರಿಸಲು ಧೈರ್ಯ ಮತ್ತು ಸಾಮರ್ಥ್ಯವನ್ನು ಹೊಂದುವಳು.

## ನಾಯಕತ್ವ

ಬುಲ್‌ಬುಲ್‌ಗಳು ಷಟ್ಕ ನಾಯಕಿಯರಾಗಿ, (Revel) ಹಿಂಡಿನ ರಜಾದಿನ, ಪ್ರಕೃತಿ ಸಂಚಾರ ಮುಂತಾದ ಕಾರ್ಯಕ್ರಮದಲ್ಲಿ ಮುಂದಾಳಾಗಿ ಕೆಲಸ ಮಾಡುವ ಮೂಲಕ ನಾಯಕತ್ವ ತರಬೇತಿ ಪಡೆಯುವಳು. ಒಮ್ಮೆ ವೃತ್ತದಲ್ಲಿ ವೃತ್ತಗೀತೆ ಹಾಡಿದ ಮೇಲೆ ಸ್ವಾರ್ಥಿಯಾಗಿರಲು ಸಾಧ್ಯವಿಲ್ಲ. ಪ್ರತಿಯೊಂದು ಚಟುವಟಿಕೆಗೂ ಸರತಿ ಕಾಯುವಳು. ಬುಲ್‌ಬುಲ್‌ಳಿಗೆ ವೃತ್ತದಲ್ಲಿ ಭಾವನಾತ್ಮಕ ಸುರಕ್ಷತೆ ದೊರೆಯುತ್ತದೆ. ಇದರಿಂದ ಪ್ರೀತಿ ಮತ್ತು ಸ್ನೇಹ ಬೆಳೆಯುತ್ತದೆ.

ಬುಲ್‌ಬುಲ್‌ಗಳೆಲ್ಲಾ ಷಟ್ಕ ನಾಯಕಿ ಮತ್ತು ಸಹ ನಾಯಕಿಯರೊಡನೆ ಬುಲ್‌ಬುಲ್ ವೃಕ್ಷದ ಸುತ್ತ ಕೈ ಕೈ ಸೇರಿಸಿ ವೃತ್ತ ಮಾಡಿ ಒಮ್ಮೆ ಎಡಕ್ಕೆ ಒಮ್ಮೆ ಬಲಕ್ಕೆ ಹೆಜ್ಜೆ ಹಾಕುತ್ತಾ ಬುಲ್‌ಬುಲ್ ಗೀತೆ ಹಾಡುವರು. ನಂತರ ಷಟ್ಕಗಳು ಬೇರ್ಪಟ್ಟು ವೃತ್ತ ಮಾಡಿಕೊಂಡು ಪ್ರತಿ ಷಟ್ಕವು ತಮ್ಮದೇ ಆದ ಷಟ್ಕ ಗೀತೆ ಹಾಡುವರು. ಷಟ್ಕ ವೃತ್ತಗಳು ಬುಲ್‌ಬುಲ್ ವೃಕ್ಷದ ಸುತ್ತಲೇ ರಚಿಸಲಾಗುವುದು. ಇದಾದ ನಂತರ ಎಲ್ಲರೂ ಸೇರಿ ಪುನಃ ದೊಡ್ಡ ವೃತ್ತ ಮಾಡುವರು, ಪುನಃ ವೃತ್ತಗೀತೆ ಹಾಡುವರು, ನಂತರ ಸಾವಧಾನಲ್ಲಿ ನಿಂತು ವಂದಿಸುವರು. ಬುಲ್‌ಬುಲ್ ವೃತ್ತ ಶಿಸ್ತನ್ನು ಬೆಳೆಸುತ್ತದೆ. ಶಿಸ್ತಿಲ್ಲದೆ ಏನನ್ನು ಸಾಧಿಸಲು ಸಾಧ್ಯವಿಲ್ಲ. ಹಿಂಡಿನ ನಾಯಕಿ ಸಾಮಾನ್ಯವಾಗಿ ವೃತ್ತದಲ್ಲಿ ಸೂಚನೆಗಳನ್ನು ನೀಡುವರು. ನಾಯಕಿ ಹಿಂಡಿಗೆ ತಕ್ಕದಾದ ನಿಯಮವನ್ನು ರೂಪಿಸಿ ಅನುಷ್ಠಾನಗೊಳಿಸಿ ಅಭ್ಯಾಸ ಮಾಡಿಸಬೇಕು.

ಬುಲ್‌ಬುಲ್ ಸಮಾವೇಶಗಳಲ್ಲಿ ಪ್ರತಿ ಹಿಂಡನ್ನು ಪ್ರತಿನಿಧಿಸುವ ಷಟ್ಕಗಳು ಬುಲ್‌ಬುಲ್ ವೃಕ್ಷದ ಸುತ್ತಲೂ ತಮ್ಮದೇ ಆದ ವೃತ್ತ ಮಾಡಿ ಜಿಗಿಯುತ್ತಾ ಸುತ್ತುತ್ತಾ ತಮ್ಮ ತಮ್ಮ ಷಟ್ಕ ಗೀತೆಗಳನ್ನು ಹಾಡುವರು. ನಂತರ ದೊಡ್ಡ ವೃತ್ತ ಮಾಡಿ ವೃತ್ತ ಗೀತೆಯನ್ನು ಹಾಡುವರು. ಇದನ್ನು ಸಾಮಾನ್ಯವಾಗಿ ಸಾರ್ವಜನಿಕರು ಮೆಚ್ಚುವರು. ಈ ವಿಧಾನವನ್ನು ಸಮಾವೇಶಗಳಲ್ಲಿ ಮಾತ್ರ ಆಚರಿಸಲಾಗುವುದು.

# ಬುಲ್‌ಬುಲ್ ಗೀತೆಗಳು

ಕೈ ಕೈ ಹಿಡಿದು ವೃತ್ತ ರಚಿಸಿ ಜಿಗಿಯುತ್ತಾ ಸುತ್ತುತ್ತಾರೆ

ನಾವು ಬುಲ್‌ಬುಲ್ ಪಕ್ಷಿಗಳು
ಸಹಾಯ ಮಾಡುತ ಹಾಡುವೆವು

ಒಟ್ಟಾಗಿ ಇದನ್ನು ಹಾಡಿ ನಂತರ ಷಟ್ಕ ವೃತ್ತ ಮಾಡಿಕೊಂಡು ತಮ್ಮ ತಮ್ಮ ಹಾಡನ್ನು ಹಾಡುವರು.

ಬುಲ್‌ಬುಲ್ ಪಕ್ಷಿಗಳ ಗುಂಪು:

ನಾವು ಬುಲ್‌ಬುಲ್ ಪಕ್ಷಿಗಳು
ಸಂತೋಷ ಪಡಿಸುವ ಹಕ್ಕಿಗಳು

1. ಪಾರಿವಾಳದ ಗುಂಪು :

ನಾವು ಮೃದುವಾದ ಪಾರಿವಾಳಗಳು
ಪರಿಶುದ್ಧವಾಗಿ ಇರುವೆವು

2. ಮಿಂಚುಳ್ಳಿಗಳ ಗುಂಪು :

ನಾವು ಚಿಕ್ಕ ಚಿಕ್ಕ ಮಿಂಚುಳ್ಳಿಗಳು
ಜಾಣತನದ ಪಕ್ಷಿಗಳು

3. ಮೈನಾ ಪಕ್ಷಿಗಳು :

ನಾವು ಚಿಕ್ಕ ಚಿಕ್ಕ ಮೈನಾಗಳು
ಕೆಲಸವನ್ನು ಮಾಡುವೆವು

4. ಗುಬ್ಬಿಗಳು :

ನಾವು ಚಿಕ್ಕ ಪುಟ್ಟ ಗುಬ್ಬಿಗಳು
ಚಟುವಟಿಕೆಯ ಮಕ್ಕಳು

5. ಮರ ಕುಟುಕಗಳು :

ನಾವು ಬಣ್ಣಬಣ್ಣದ ಮರ ಕುಟುಕಗಳು
ವಿರಾಮವಿಲ್ಲದೆ ಇರುವೆವು

## ಹಿಂಡಿನ ಸಭೆ / ಪೌವ್‌ವವ್ (Pow-Vow)

ಬುಲ್‌ಬುಲ್ ಮಕ್ಕಳು ತಮ್ಮ ಕಾರ್ಯಕ್ರಮಗಳನ್ನು ತಾವೇ ರೂಪಿಸುವ ಸಾಮರ್ಥ್ಯವನ್ನು ಹೊಂದಿದ್ದಾರೆಂದು ಲಾರ್ಡ್ ಬೇಡನ್ ಪೌವೆಲ್ಲರು ನಂಬಿದ್ದರು. ಬುಲ್‌ಬುಲ್‌ಗಳು ಈ ಕಾರ್ಯದಲ್ಲಿ ಆಸಕ್ತಿಯಿಂದ ಶ್ರದ್ಧೆಯಿಂದ ತೊಡಗುತ್ತಾರೆ. ಈ ಕಾರ್ಯ ಹಿಂಡಿನ ವ್ಯಾಪ್ತಿಯ ಒಳಗಿನ ಅಥವಾ ಹೊರಗಿನದಾಗಿರಬಹುದು. ಬುಲ್‌ಬುಲ್‌ಗಳು ಒಂದು ದಿನಚರಿ ಪುಸ್ತಕವನ್ನು ಇಡಬೇಕು. ಇದರಲ್ಲಿ ಚಟುವಟಿಕೆಯ ಬಗ್ಗೆ ಸಂಕ್ಷಿಪ್ತವಾಗಿ ಬರೆದು ಹಿಂಡಿನ ಸಭೆಯಲ್ಲಿ ವರದಿ ಮಾಡಬೇಕು.

ಹಿಂಡಿನ ಸಭೆ ಎಲ್ಲಾ ಬುಲ್‌ಬುಲ್‌ಗಳಿಗೂ ಮಾತನಾಡುವ ಅವಕಾಶ ಕಲ್ಪಿಸುವ ವೇದಿಕೆ. ಹಿಂಡಿನ ನಾಯಕಿ, ಸಹನಾಯಕಿ ಹಾಗೂ ಬುಲ್‌ಬುಲ್‌ಗಳು ಈ ಸಭೆಯ ಸದಸ್ಯರಾಗಿರುತ್ತಾರೆ. ಇದು ಬುಲ್‌ಬುಲ್ ವೃತ್ತದಕ್ಕಿಂತ ಚಿಕ್ಕದು ಎಲ್ಲರೂ ಪಕ್ಕ ಪಕ್ಕ ಕುಳಿತುಕೊಳ್ಳುತ್ತಾರೆ. ಹೀಗೆ ಕುಳಿತುಕೊಳ್ಳುವುದರಿಂದ ಎಲ್ಲರಿಗೂ ಎಲ್ಲರ ಮಾತು ಕೇಳುತ್ತದೆ. ನಾವೆಲ್ಲಾ ಒಂದೇ ಎಂಬ ಭಾವನೆ ಉಂಟಾಗುತ್ತದೆ. ಇದರಲ್ಲಿ ಚಾರಿತ್ರ್ಯಾಭಿವೃದ್ಧಿಯ ಮೌಲ್ಯ ಹೆಚ್ಚುತ್ತದೆ.

ಬುಲ್‌ಬುಲ್‌ನ ವಯೋಮಾನದಲ್ಲಿ ಇದು ಬೇಕು ಇದು ಬೇಡ ಎಂಬ ಭಾವನೆ ಬಲವಾಗಿರುತ್ತದೆ. ಆದ್ದರಿಂದ ಮತ್ತೊಬ್ಬರ ಅಭಿಪ್ರಾಯ ಪ್ರತಿನಿಧಿಸಲು ಸಾಧ್ಯವಿಲ್ಲ. ಎಲ್ಲರಿಗೂ ಸಮಾನವಾಗಿ ಮಾತನಾಡುವ, ಚುನಾಯಿಸುವ ಹಕ್ಕು ಇದೆ. ಹೀಗೆ ಮಾಡುವಾಗ ಪ್ರತಿ ಸಾರಿ ತಮ್ಮ ಎರಡು ಬೆರಳುಗಳನ್ನು ನೆಲದ ಮೇಲಿಡಬೇಕು. ಇದರಿಂದ ಮಾತನಾಡುವ ಶಿಸ್ತು ಕಲಿಯುತ್ತಾರೆ. ಹಿಂಡಿನ ನಾಯಕಿ ಈ ಸಭೆಯ ಅಧ್ಯಕ್ಷಳಾಗಿ ಎಲ್ಲರ ಮಾತು ಕೇಳಿದ ಮೇಲೆ ತನ್ನ ಅಭಿಪ್ರಾಯ ಅಥವಾ ನಿರ್ಣಯ ತಿಳಿಸುತ್ತಾರೆ.

ಈ ಸಭೆಯಲ್ಲಿ ಹಿಂಡಿನ ಚಟುವಟಿಕೆ, ಹಿಂಡಿನ ರಜಾದಿನ, ಶಿಬಿರಾವಾಸ, ಪ್ರಕೃತಿ ಸಂಚಾರ, ಚಿಂತನ ದಿನಾಚರಣೆ, ಸಮಾರಂಭ, ಮಾಸಿಕ ಕಾರ್ಯಕ್ರಮ, ಹೀಗೆ ಎಲ್ಲಾ ಚಟುವಟಿಕೆ ಕುರಿತು ಮುಕ್ತವಾಗಿ ಚರ್ಚಿಸುತ್ತಾರೆ. ಇದರಿಂದ ಬುಲ್‌ಬುಲ್‌ಗಳ ಆಸಕ್ತಿ ಮತ್ತು ಭಾಗವಹಿಸುವಿಕೆ ಹೆಚ್ಚುತ್ತದೆ.

ನಾಯಕಿ ಮಕ್ಕಳೊಡನೆ ಹಸನ್ಮುಖದಿಂದ ಮಾತನಾಡಬೇಕು. ನಕ್ಕುನಗಿಸಬೇಕು. ಎಲ್ಲರಿಗೂ ಮಾತನಾಡಲು ಮುಕ್ತ ಅವಕಾಶ ನೀಡಬೇಕು. ಅಂದಿನ ಸಭೆಯಲ್ಲಿ ಚರ್ಚಿಸಬೇಕೆಂದಿರುವ ಎಲ್ಲಾ ವಿಷಯಗಳು ಚರ್ಚಿತವಾಗಿದೆ

ಎಂದು ಖಾತ್ರಿ ಪಡಿಸಿಕೊಳ್ಳಬೇಕು. ಒಮ್ಮೆ ಬುಲ್‌ಬುಲ್‌ಗಳಿಗೆ ಅವರ ಮಾತಿಗೆ ಆಸಕ್ತಿಗೆ ಬೆಲೆ ಇದೆ ಎಂದಾದರೆ ಅವರು ಆಸಕ್ತಿಯಿಂದ ಭಾಗವಹಿಸಲಾರಂಭಿಸುತ್ತಾರೆ. ಸಹಕರಿಸುತ್ತಾರೆ, ಸಭೆಯಲ್ಲಿ ಸಿಂಹಪಾಲು ತೆಗೆದುಕೊಳ್ಳುತ್ತಾರೆ. ಈ ಮಕ್ಕಳಲ್ಲಿ ನಾಯಕತ್ವ ಚೆನ್ನಾಗಿ ಬೆಳೆಯುತ್ತದೆ. ಇದು ನಾಯಕತ್ವಕ್ಕೆ ಭದ್ರ ಬುನಾದಿಯಾಗುತ್ತದೆ.



1. **ಹಿಂಡಿನ ಸಭೆ ಹಿಂಡಿನ ಸಭೆ**
**ಹುಶ್! ಹುಶ್! ಹುಶ್!**
**ಸಾಕಷ್ಟು ವಿಷಯ ಸಾಕಷ್ಟು ವಿನೋದ**
**ಹೌದು! ಹೌದು! ಹೌದು!**

**ಸ್ವಾಗತ ನಿಮಗೆ ನಮ್ಮ ಸ್ವಾಗತ**
**ಬುಲ್‌ಬುಲ್ ಏನು ಮಾಡುತ್ತಾರೆ? ಪ್ರಶ್ನೆಯೆ?**
**ಬನ್ನಿ, ಬನ್ನಿ, ನಾವು ತೋರಿಸುತ್ತೇವೆ**
**ಆಟ ಆಡ್ತೇವೆ.**
**ನಲಿಯುತ್ತಾ ಕಲಿಯುತ್ತೇವೆ,**
**ಯಾವಾಗಲು ಸಹಾಯ ಮಾಡುತ್ತೇವೆ**
**ಮಾಡಲು ಎಷ್ಟೊಂದು ಕೆಲಸಗಳಿವೆ!**
**ಕಲಿಯಲು ಎಷ್ಟೊಂದು ವಿಷಯಗಳಿವೆ!**
**ಬನ್ನಿ ಬನ್ನಿ ಸಭೆ ಸೇರೋಣ**
**ಬೇಗ ಬೇಗ ಕೆಲಸ ಮಾಡೋಣ**

ದೊಡ್ಡ ವೃತ್ತ ಮಾಡಿ ಒಮ್ಮೆ ಜಿಗಿದು ಪೌವ್‌ವವ್ ಎಂದು ಜೋರಾಗಿ ಕೂಗುತ್ತಾರೆ. ಎರಡನೇ ಬಾರಿ ಜಿಗಿದು ಪೌವ್‌ವವ್ ಎಂದು ಸ್ವಲ್ಪ ಮೆತ್ತಗೆ ಕೂಗುತ್ತಾರೆ. ಮೂರನೆ ಬಾರಿ ಜಿಗಿದು ಪಿಸುದನಿಯಲ್ಲಿ ಪವವ್ ಎನ್ನುತ್ತಾರೆ. ಹೀಗೆ ಮೂರು ಬಾರಿ ಜಿಗಿಯುವ ವೇಳೆಗೆ ದೊಡ್ಡ ವೃತ್ತ ಚಿಕ್ಕದಾಗಿ ಎಲ್ಲರೂ ಒಬ್ಬರ ಪಕ್ಕಕ್ಕೆ ಒಬ್ಬರು ಬಂದು ನಿಲ್ಲುತ್ತಾರೆ. ನಂತರ ಚಿಕ್ಕ ವೃತ್ತದಲ್ಲಿ ಕುಳಿತುಕೊಳ್ಳುತ್ತಾರೆ. ಈ ವೃತ್ತದಲ್ಲಿ ನಾಯಕಿಯು ಇರುತ್ತಾಳೆ.

2. **ನಾಯಕಿ :** ಸಭೆಯ ವೃತ್ತಕೆ ಯಾರು ಬರುತ್ತೀರ?

ಒಂದು ಷಟ್ಕ : ಮೈನಾ ಪಕ್ಷಿಗಳು ಬರುತ್ತಿದ್ದೇವೆ.

ಹೀಗೆ ಒಂದಾದ ಮೇಲೆ ಒಂದು ಷಟ್ಕ ಪಕ್ಷಿಯ ಹೆಸರು ಹೇಳುತ್ತಾರೆ. ಆಯಾ ಷಟ್ಕಗಳು, ಆಯಾ ಪಕ್ಷಿಗಳ ಕೂಗನ್ನು ಕೂಗುತ್ತಾ ಮಧ್ಯೆ ಬಂದು ಎಲ್ಲರೂ ಸೇರಿ ದೊಡ್ಡ ವೃತ್ತ ಮಾಡುವರು. ಕೆಳಗಿನ ಹಾಡು ಹಾಡುವರು ನಂತರ ಹತ್ತಿರ ಹತ್ತಿರ ಸರಿಯುತ್ತಾ ಚಿಕ್ಕ ವೃತ್ತ ಮಾಡಿ ಕುಳಿತುಕೊಳ್ಳುವರು.

## ಹಿಂಡಿನ ಸಭಾ ಗೀತೆ

ಮೆಲ್ಲಗೆ ಸದ್ದು ಮಾಡದೆ
ಪೌವ್‌ವವ್ ವೃತ್ತ ಮಾಡುತ್ತೇವೆ
ಮೊದಲು ಒಳಕ್ಕೆ ನಂತರ ಹೊರಕ್ಕೆ ಜಗಿಯುತ್ತೇವೆ.
ನೋಡಿ ನಾವು ಎಷ್ಟು ಚೆನ್ನಾಗಿ ಕುಳಿತುಕೊಳ್ಳುತ್ತೇವೆ.
ಪೌವ್‌ವವ್ ಹುಶ್! ಹುಶ್!



# ೮. ಬುಲ್‌ಬುಲ್ ಸಮಾರಂಭಗಳು

"ಸರಳತೆ ಮತ್ತು ಪಾವಿತ್ರ್ಯತೆ ಬುಲ್‌ಬುಲ್ ಸಮಾರಂಭಗಳ ಲಕ್ಷಣವಾಗಿರಬೇಕು" ಬಿ.ಪಿ.

ಬುಲ್‌ಬುಲ್ ಸಮಾರಂಭಗಳು ಸ್ನೇಹ ಪ್ರಾಮಾಣಿಕತೆ ಮತ್ತು ನಿಷ್ಠೆಯಿಂದ ಕೂಡಿರಬೇಕು. ಇದು ಸಾಮಾನ್ಯ ಚಟುವಟಿಕೆಗಿಂತ ಭಿನ್ನವಾಗಿ ವರ್ಣರಂಜಿತ ಅನುಭವಗಳನ್ನು ನೀಡಬೇಕು. ಇದರಲ್ಲಿ ಗುಪ್ತತೆ, ಸವಾಲು ಆಶ್ಚರ್ಯಕರ ಕಾರ್ಯಕ್ರಮಗಳಿದ್ದರೆ ತಕ್ಷಣ ಮಕ್ಕಳನ್ನು ಆಕರ್ಷಿಸುತ್ತದೆ. ಇದರಲ್ಲಿ ಎಲ್ಲಾ ಬುಲ್‌ಬುಲ್‌ಗಳನ್ನು ತೊಡಗಿಸಬೇಕು. ಇದರ ಕಾರ್ಯಕ್ರಮಗಳು ಸರಳವಾಗಿದ್ದು ಎಲ್ಲರಿಗೂ ಅರ್ಥವಾಗುವಂತಿರಬೇಕು, ಆನಂದಿಸುವಂತಿರಬೇಕು.

ಸಮಾರಂಭಗಳನ್ನು ಆಯೋಜಿಸುವುದರಿಂದ ಸೃಜನಶೀಲತೆ ಬೆಳೆಯುತ್ತದೆ. ನಿತ್ಯದ ಚಟುವಟಿಕೆಗಳಿಂದ ಬದಲಾವಣೆ ದೊರೆಯುತ್ತದೆ. ಸಭೆಯಲ್ಲಿ ಇದನ್ನು ಚರ್ಚಿಸುವಾಗ ಆಯೋಜಿಸುವಾಗ ಉತ್ಸಾಹವಿರುತ್ತದೆ.

ಸಮಾರಂಭಗಳು ಹಿಂಡಿನ ಚಟುವಟಿಕೆಗೆ ಉತ್ಸಾಹ ತುಂಬುತ್ತದೆ.

**ಸಮಾರಂಭಗಳು**

1. ಹಿಂಡಿನ ಸಭೆಯ ಪ್ರಾರಂಭ, ಮುಕ್ತಾಯ
2. ಹಕ್ಕಿಗಳ ಸಭೆಯ ಪ್ರಾರಂಭ ಮುಕ್ತಾಯ
3. ಬುಲ್‌ಬುಲ್ ವೃತ್ತ
4. ದೀಕ್ಷಾ ಸಮಾರಂಭ
5. ಸ್ವಾಗತ ಸಮಾರಂಭ
6. ವಿದಾಯ ಸಮಾರಂಭ
7. ಪದಕ ಪ್ರದಾನ ಸಮಾರಂಭ
8. ಕಲರವ ಸಮಾರಂಭ

## 1. ಪ್ರಾರಂಭ ಸಮಾರಂಭ – Opening Ceremony

1. **ಹಾಡಿನ ಸ್ವಾಗತ:** ಬುಲ್‌ಬುಲ್‌ಗಳು ಸಭೆಗೆ ಬಂದು ಅಲಲ್ಲಿ ನಿಂತಿರುವರು. ನಾಯಕಿ ಬಂದು ಹಾಡನ್ನು ಹಾಡುವರು. ಎಲ್ಲರೂ ಹಾರುತ್ತಾ ಬರುವರು ವೃತ್ತ ಮಾಡುವರು ಬುಲ್‌ಬುಲ್ ಗೀತೆಯಿಂದ ಸಭೆ ಪ್ರಾರಂಭಿಸುವರು.

ಏನಾಶ್ಚರ್ಯ!

2. ನಾಯಕಿ ಬುಲ್‌ಬುಲ್‌ಗಳಿಗೆ ಬಚ್ಚಿಟ್ಟುಕೊಳ್ಳಲು ಹೇಳಿ. ತಾನು ಬಂದು ಖಾಲಿ ಸ್ಥಳ ನೋಡಿ ಹುಡುಕುವಂತೆ ನಟಿಸಿ ಹೀಗೆ ಕೂಗುತ್ತಾಳೆ "ಏನಾಶ್ಚರ್ಯ! ಒಬ್ಬ ಬುಲ್‌ಬುಲ್ ಇಲ್ಲವೇ! ಸಭೆ ಮರೆತು ಬಿಟ್ಟರೆ" ತಕ್ಷಣವೇ ಷಟ್ಕಗಳು "ತಮ್ಮ ಪಕ್ಷಿಯ ಕೂಗುಗಳನ್ನು ಕೂಗುವರು ರೆಕ್ಕೆ ಬಡಿಯುತ್ತಾ ನಾಯಕಿ ಸುತ್ತಲೂ ವೃತ್ತಾಕಾರದಲ್ಲಿ ನಿಲ್ಲುವರು. ನಂತರ ಬುಲ್‌ಬುಲ್ ಗೀತೆಯಿಂದ ಸಭೆ ಪ್ರಾರಂಭಿಸುವರು.

## 2. ಕಾಣೆಯಾದವರು

ಬುಲ್‌ಬುಲ್‌ತಮ್ಮ ಷಟ್ಕ ಮೂಲೆಯಲ್ಲಿ ಅಡಗಿರುವರು ನಾಯಕಿಯರು ಹುಡುಕುತ್ತಾ ಹೋಗಿ ಹಾಡುವರು.

ಎಲ್ಲಾ ಬುಲ್‌ಬುಲ್‌ಗಳು ವೃತ್ತ ಮಾಡಿ ಬುಲ್‌ಬುಲ್ ಗೀತೆ ಹಾಡುವ ಮೂಲಕ ಸಭೆ ಪ್ರಾರಂಭಿಸುವರು.

## 3. ಬುಲ್‌ಬುಲ್ ಕಲ್ಲುಗಳು

ಬುಲ್‌ಬುಲ್‌ಗಳು ಸಭೆಯ ಸ್ಥಳಕ್ಕೆ ಬಂದು ಕುಳಿತು ತಲೆನೆಲಕ್ಕೆ ಮುಟ್ಟಿಸಿ ಅಲುಗಾಡದಂತೆ ಕುಳಿತಿರುವರು. ನಾಯಕಿ ಬಂದು ಬುಲ್‌ಬುಲ್‌ಗಳು ಎಲ್ಲಿ? ಎಂದು ನೋಡುವರು. ಆ ನಂತರ ಒಡಾಡುತ್ತ ಸಾಕಾಯಿತು ಎಂದು ಬಂದು ಒಂದು ಕಲ್ಲಿನ ಮೇಲೆ ಕೂರುವಂತೆ ಮಾಡುವರು. ಬುಲ್‌ಬುಲ್‌ಗಳು ತಕ್ಷಣ "ನಾವು ಕಲ್ಲುಗಳಲ್ಲ, ನಾವು ಬುಲ್‌ಬುಲ್‌ಗಳು" ಎಂದು ಜಿಗಿದು ಏಳುವರು. ನಂತರ ವೃತ್ತ ಮಾಡಿ ಬುಲ್‌ಬುಲ್ ಗೀತೆ ಹಾಡಿ ಸಭೆ ಪ್ರಾರಂಭಿಸುವರು.

## 4. ಕಳೆದು ಹೋದ ಪಕ್ಷಿಗಳು

ಷಟ್ಕ ನಾಯುಕಿಯುರನ್ನು ಬಚ್ಚಿಟ್ಟುಕೊಳ್ಳಲು ಹೇಳಲಾಗುವುದು. ಬುಲ್‌ಬುಲ್‌ಗಳು ಬಂದಾಗ, "ಎಲ್ಲರೂ ಬಂದಿದ್ದಾರೆಯೆ ನೋಡಿ, ಸಭೆ ಪ್ರಾರಂಭಿಸೋಣ ಅಂತ ಹಿಂಡಿನ ನಾಯಕಿ ಹೇಳುವರು. ನೋಡುತ್ತಾರೆ ಆಶ್ಚರ್ಯ ಷಟ್ಕ ನಾಯಕಿಯರಿಲ್ಲ. ಸುತ್ತಲೂ ನೋಡುತ್ತಾರೆ ಮರಗಳಿವೆ. ಅದರಲ್ಲಿ ಹಣ್ಣುಗಳಿವೆ. ಓಹೊ ಇವರೆಲ್ಲಾ ಹಣ್ಣು ತಿನ್ನಲು ಹೋಗಿದ್ದಾರೆ ಎಂದು ಮಾತನಾಡಿ ಕೊಳ್ಳುವಷ್ಟರಲ್ಲಿ ಹಿಂಡಿನ ನಾಯಕಿ "ಓಡಿ! ಓಡಿ! ನಿಮ್ಮ ನಿಮ್ಮ ನಾಯಕಿಯರು ಅವರನ್ನು ಹುಡುಕಿಕೊಂಡು ಬಂದು ವೃತ್ತ ಮಾಡಿ ಸಭೆ ಪ್ರಾರಂಭ ಮಾಡೋಣ", ಎನ್ನುವರು.

### 5. ಚುಕು ಬುಕು ರೈಲು

ಮರಗಳಿದ್ದರೆ ಸರಿ. ಇಲ್ಲವಾದರೆ ಬುಲ್‌ಬುಲ್ ಕೈಗೆ ಪಕ್ಷಿ ಹೆಸರು ಬರೆದು ಹಿಡಿಸಿ ಎಷ್ಟು ಷಟ್ಕ ಪಕ್ಷಿಗಳಿವೆಯೋ ಅಷ್ಟು ನಿಲ್ದಾಣ ಮಾಡಿಸಿ ಷಟ್ಕಾವಾರು ಎಲ್ಲಾ ಬುಲ್‌ಬುಲ್‌ಗಳು ರೈಲಿನಂತೆ ಒಬ್ಬರ ಸೊಂಟ ಒಬ್ಬರು ಹಿಡಿದು ಜುಕುಬುಕು ಹೇಳುತ್ತಾ ಸಿದ್ಧವಾಗಲಿ. ಹಿಂಡಿನ ನಾಯಕಿ ಬಳಿ ಕೆಂಪು ಹಸಿರು ಬಾವುಟ ಇರುತ್ತದೆ. ಹಸಿರು ನಿಷಾನೆ ತೋರಿಸಿದರೆ ಮುಂದೆ ಸಾಗುತ್ತದೆ. ಕೆಂಪು ತೋರಿಸಿದರೆ ನಿಲ್ಲುತ್ತದೆ. ರೈಲು ಹೊರಡುತ್ತದೆ ತಮ್ಮ ಪಕ್ಷಿ ನಿಲ್ದಾಣ ಬಂದಾಗ ಹತ್ತುವುವು ಆ ಪಕ್ಷಿಗಳು. ಎಲ್ಲರೂ ನಿಲ್ದಾಣ ಸೇರುವವರೆಗೂ ರೈಲು ಚಲಿಸುತ್ತದೆ. ನಂತರ ವೃತ ಮಾಡಿ ಬುಲ್‌ಬುಲ್ ವೃತ್ತ ಗೀತೆ ಹಾಡುವರು ಕಾರ್ಯಕ್ರಮ ಪ್ರಾರಂಭವಾಗುವುದು.

### 6. ಪಕ್ಷಿಗಳಿಂದ ಸಾಂತ್ವನ

ಹಿಂಡಿನ ನಾಯಕಿ ಬುಲ್‌ಬುಲ್ ವೃಕ್ಷ ಹಿಡಿದುಕೊಂಡು ವಿಷಾದದಿಂದ ನಿಲ್ಲುವಳು. ಕೂ ಕೂ ಕೂ ಎನ್ನುತ್ತಾ ಅಳುವ ರೀತಿಯಲ್ಲಿ ಶಬ್ದ ಮಾಡುವಳು. ಷಟ್ಕ ನಾಯಕಿಯರು ಹಾರುತ್ತಾ ಬಂದು "ನೀವೇಕೆ ಅಳುತ್ತಿದ್ದೀರಿ?" ಎಂದು ಕೇಳುವರು. (ಎರಡು ಮೂರು ಬಾರಿ ಕೇಳಲಿ) ಹಿಂಡಿನ ನಾಯಕಿ ದುಃಖದಿಂದ "ನಾನು ಒಂಟಿ, ನಾನು ಒಂಟಿ, ನಾನು ಒಂಟಿ" ಎನ್ನುವರು.

ಷಟ್ಕ ನಾಯಕಿಯರು "ಅಳಬೇಡಿ ನಾವು ನಿಮಗೆ ಸಂಗಾತಿಯನ್ನು ತರುತ್ತೇವೆ (3 ಬಾರಿ). ಷಟ್ಕ ನಾಯಕಿ ಸಂಕೇತ ನೀಡಿದ ತಕ್ಷಣ ಎಲ್ಲಾ ಬುಲ್‌ಬುಲ್‌ಗಳು ಹಾರುತ್ತ ಓಡಿ ಬಂದು ಹಿಂಡಿನ ನಾಯಕಿಯರೊಡನೆ ವೃತ್ತ ಮಾಡುವರು. ಬುಲ್‌ಬುಲ್ ವೃತ್ತ ಗೀತೆ ಹಾಡಿ ಸಭೆ ಪ್ರಾರಂಭಿಸುವರು.

### 7. ಟಿಕೇಟ್ ಪಡೆಯುವುದು

ಹಿಂಡಿನ ನಾಯಕಿ ಷಟ್ಕಗಳು ಚದುರಿನಿಂತಿರುವಾಗ ಹೋಗಿ ಪ್ರತಿ ನಾಯಕಿಗೂ ಟಿಕೇಟ್ ನೀಡುವರು ಟಿಕೇಟ್ ಪಡೆದ ತಕ್ಷಣ ರೈಲುಗಳು ಚಲಿಸುತ್ತಾ ಸಭೆಯ ಸ್ಥಳಕ್ಕೆ ಬರುವುವು. ಒಂದು ವೃತ್ತ ಮಾಡಿ ವೃತ್ತ ಗೀತೆ ಹಾಡಿ ಸಭೆ ಪ್ರಾರಂಭಿಸುವರು.

ಹೀಗೆ ಬಸ್ಸು / ವಿಮಾನ / ದೋಣಿ ಯಾವ ವಾಹನವನ್ನಾದರೂ ಮಾಡಬಹುದು.

## 8. ಸುಂದರ ಸ್ವಪ್ನ

ಹಿಂಡಿನ ನಾಯಕಿ ಮರದ ಕೆಳಗೆ ಮಲಗಿರುವರು. "ನಾಯಕಿಯವರೇ (2) ನಾವೇನು ಮಾಡಬೇಕು (2), ನಾವು ವೃತ್ತವನ್ನು ನಿಮ್ಮ ಸುತ್ತಲೂ ಮಾಡುತ್ತೇವೆ, ನಮ್ಮ ಬಳಿ ಇರುವ ಮಾಯಾ ಎಲೆಯನ್ನು ಕೊಡುತ್ತೇವೆ, ನಿಮಗೆ ಸುಂದರವಾದ ಸ್ವಪ್ನ ನಿಜವಾಗುವಂತೆ ಮಾಡುತ್ತೇವೆ" ನಂತರ ತಮ್ಮ ಕೈಯಲ್ಲಿರುವ ಕಾಗದದ ಬಣ್ಣದ ಎಲೆಗಳನ್ನು ಅಥವಾ ಹೂಗಳನ್ನು ಅವರ ಮೇಲೆ ಎಸೆಯುತ್ತಾರೆ. ತಕ್ಷಣ ನಾಯಕಿ ಎದ್ದು ಬಿಡುತ್ತಾರೆ.

**ನಾಯಕಿ** : "ನೀವು ಯಾರು? ನೀವು ಹೇಗೆ ನನ್ನ ಕನಸ್ಸನ್ನು ನನಸು ಮಾಡುವಿರಿ?"

"ನಾವು ಬುಲ್‌ಬುಲ್‌ಗಳು! ನಾವು ಬುಲ್‌ಬುಲ್‌ಗಳು!" ಎನ್ನುತ್ತಾ ವೃತ್ತ ಮಾಡಿ ವೃತ್ತ ಗೀತೆ ಹಾಡಿ ಸಭೆ ಪ್ರಾರಂಭಿಸುತ್ತಾರೆ.

## 9. ತಪಾಸಣ ರೈಲು

ಷಟ್ಕಗಳು ತಮ್ಮ ತಮ್ಮ ಮೂಲೆಯಲ್ಲಿ ನಿಲ್ಲುತ್ತಾರೆ. ಷಟ್ಕನಾಯಕಿ ಅವರವರ ಪಕ್ಷಿಯ ಹೆಸರಿರುವ ಟಿಕೇಟ್ ಕೊಡುತ್ತಾರೆ. ಹಿಂಡಿನ ನಾಯಕಿ ಸಹನಾಯಕಿ ರೈಲಿನಂತೆ ಚುಕುಬುಕು ಮಾಡುತ್ತಾ ಒಂದು ಷಟ್ಕಗಳನ್ನು ಕರೆದುಕೊಂಡು ಸಭೆಯ ಸ್ಥಳಕೆ ಬರುತ್ತಾರೆ. ಪ್ರತಿ ಷಟ್ಕ ರೈಲು ಸುತ್ತುವಾಗ ಬುಲ್‌ಬುಲ್‌ಗಳ ಉಗುರನ್ನು ನಾಯಕಿ ಪರೀಕ್ಷಿಸುತ್ತಾಳೆ. ಉಗುರು ಸರಿಯಾಗಿಲ್ಲದಿದ್ದರೆ ಇಳಿಸಿ ಉಳಿದವರನ್ನು ಹತ್ತಿಸಿಕೊಂಡು ಮುಂದಕ್ಕೆ ಸಾಗುತ್ತಾರೆ. ಇಳಿಸಿದವರನ್ನು ಉಗುರನ್ನು ಸರಿ ಮಾಡುವಂತೆ ಹೇಳಿ ರೈಲು ಮರಳಿ ಬರುವಾಗ ಹತ್ತಿಸಿಕೊಳ್ಳಲಾಗುವುದು ಎಂದು ತಿಳಿಸಲಾಗುತ್ತದೆ. ಕೊನೆಯಲ್ಲಿ ಸಂಪೂರ್ಣ ರೈಲು ವೃತ್ತ ಮಾಡಿ ವೃತ್ತ ಗೀತೆ ಹಾಡಿ ಸಭೆ ಪ್ರಾರಂಭಿಸುತ್ತಾರೆ.

## 10. ಪಕ್ಷಿ ಕೂಗು

ಅವರ ಸಂಕೇತ ಪಕ್ಷಿಯ ಬಣ್ಣ ಅನುಸರಿಸಿ ಅಲಂಕರಿಸಿಕೊಂಡು ಬರುವಂತೆ ಹೇಳುತ್ತಾರೆ. ಅವರವರ ಕೂಗು ಕೂಗುತ್ತಾ ಒಂದು ವೃತ್ತ ಮಾಡಿ ವೃತ್ತ ಗೀತೆ ಹಾಡಿ ಸಭೆಗೆ ಸಿದ್ಧರಾಗುತ್ತಾರೆ.

## 11. ಪ್ರಾಣಿಯಂತೆ ನಡೆಯುತ್ತಾ ಬರುವುದು

ಹಿಂಡಿನ ನಾಯಕಿ ಷಟ್ಕ ನಾಯಕಿಯನ್ನು ಕರೆದು ಒಬ್ಬೊಬ್ಬರಿಗೆ ಒಂದೊಂದು ಪ್ರಾಣಿ ಹೆಸರು ನೀಡುತ್ತಾರೆ. ಆಯಾ ಷಟ್ಕಗಳು ಅವರಿಗೆ ನೀಡಿದ ಪ್ರಾಣಿಯ ಕೂಗು ಕೂಗುತ್ತಾ ಹಾಗೆಯೆ ನಡೆಯುತ್ತಾ ಬಂದು ಬುಲ್‌ಬುಲ್ ವೃತ್ತ ಮಾಡುತ್ತಾರೆ ವೃತ್ತ ಗೀತೆ ಹಾಡಿ ಸಭೆ ಪ್ರಾರಂಭಿಸುತ್ತಾರೆ.

## 12. ವಾದ್ಯ ವೃಂದ

ಷಟ್ಕಗಳಿಗೆ ವಾದ್ಯದ ಹೆಸರು ನೀಡಿ ಪ್ರತಿ ಷಟ್ಕವು ಆ ವಾದ್ಯಗಳನ್ನು ನುಡಿಸುತ್ತಾ ಒಂದು ವೃತ್ತ ಮಾಡಲು ಹೇಳುತ್ತಾರೆ. ನಂತರ ವೃತ್ತ ಗೀತೆ ಹಾಡಿ ಸಭೆ ಪ್ರಾರಂಭಿಸುತ್ತಾರೆ.

## ಮುಕ್ತಾಯ ಸಮಾರಂಭ

ಬುಲ್‌ಬುಲ್‌ಗಳು ವೃತ್ತದಲ್ಲಿ ನಿಂತು ಆಜ್ಞೆಯ ಮೇರೆಗೆ ಮಂಡಿಯೂರಿ ಕುಳಿತುಕೊಂಡು ಹೀಗೆ ಹಾಡುವರು.

1. **ದಿನದ ಕೊನೆಯಲ್ಲಿ ಮಂಡಿಯೂರಿ ನಮಿಸುವೆವು,**
   **ನಮ್ಮ ಕೆಲಸ ನಮ್ಮ ಆಟಕ್ಕೆ ನಿನಗೆ ವಂದನೆ,**
   **ನಾನು ಒಳ್ಳೆಯವಳಾಗಲು ಪ್ರಯತ್ನಿಸುತ್ತೇನೆ,**
   **ನನಗೆ ನಾನು ಒಳ್ಳೆಯವಳಾಗಬೇಕೆಂದು ತಿಳಿದಿದೆ,**
   **ಅದುವೇ ನನ್ನ ಪ್ರಾರ್ಥನೆ ನಿನ್ನಲ್ಲಿ ದಿನದ ಕೊನೆಯಲಿ,**
   **ಬೈ ಬೈ ಎಂದು ನಾಯಕಿಗೆ ಹೇಳಿ ಹೊರಡುವರು.**
2. ಷಟ್ಕ ನಾಯಕಿಯರನ್ನು ಹಿಂಡಿನ ನಾಯಕಿಯರು ಹಿಡಿದಿರುವರು. ಸುತ್ತಮುತ್ತ ಮೂರು ನಾಲ್ಕು ವಸ್ತು ಆರಿಸಿತರುವರು. ಇದು ಬುಲ್‌ಬುಲ್ ವಸ್ತುಗಳಿಗೆ ಹೊಂದಿಕೆಯಾದರೆ ಆ ಷಟ್ಕವನ್ನು ಮನೆಗೆ ಹೋಗಲು ಬಿಡುವರು. ಹೊಂದಿಕೆ ಆಗದಿದ್ದರೆ ಆ ವಿಧಾನವನ್ನು ಪುನರಾವರ್ತಿಸುವರು.
3. ಸುರಕ್ಷಿತವಾಗಿ ಹೋಗಿ ಬನ್ನಿ, ಹೋಗಿ ಬನ್ನಿ ದೇವರು ನಿಮ್ಮೊಡನಿರುತ್ತಾನೆ. ಎಂದು ಹೇಳಿ ಸರಳವಾಗಿ ವಿದಾಯ ಮಾಡುವರು.
4. ಸುರಕ್ಷಿತವಾಗಿ ಮನೆ ಮುಟ್ಟುವ ಅದೃಷ್ಟ ನಿಮ್ಮದಾಗಲಿ, ನನ್ನ ನೆನಪಿಸಿಕೊಳ್ಳಿ.
5. ಒಳ್ಳೆಯದನ್ನು ಮಾಡಿ ಶುಭ ರಾತ್ರಿ.

6. ಬುಲ್‌ಬುಲ್‌ಗಳು ಹತ್ತಿರ ಹತ್ತಿರ ವೃತ್ತದಲ್ಲಿ ನಿಲ್ಲುವರು. ಕೈ ಹಿಂದಕ್ಕೆ ಕಟ್ಟಿರುವರು. ನಾಯಕಿಯು ವೃತ್ತದಲ್ಲಿ ಸೇರಿರುವರು. ಮುಕ್ತಾಯ ಗೀತೆಯನ್ನು ಹಾಡಿದ ಮೇಲೆ ಬುಲ್‌ಬುಲ್ ಕೈ ಮೇಲೆ ಕೈ ಹಾಕಿ ಅಕ್ಕಪಕ್ಕದ ಕೈಗಳನ್ನು ಹಿಡಿಯುವರು. ನಾಯಕಿ ಪಕ್ಕದವಳ ಕೈ ಮೃದುವಾಗಿ ಅಮುಕುವರು. ಹೀಗೆ ಕೈ ಕೈ ಅಮುಕುತ್ತಾ ವೃತ್ತದಲ್ಲಿ ತರಂಗ ಸಂಚರಿಸಿ ನಾಯಕಿ ತರಂಗ ಸ್ವೀಕರಿಸುವಳು. ನಂತರ "ನಮ್ಮ ಕೈಲಾದ ಒಳ್ಳೆಯದನ್ನು ಮಾಡುತ್ತೇವೆ" ಎಂದು ಕೂಗಿ ಹೇಳಿ ಹಾರಿ ಹೋಗುವರು.

7. ಬುಲ್‌ಬುಲ್‌ಗಳು ಹತ್ತಿರಹತ್ತಿರ ವೃತ್ತ ಮಾಡಿ "ನಿಂತು ವಿದಾಯ" ಹೇಳುವರು

   **ಪುನಃ ಭೇಟಿಯಾಗುವವರೆಗೂ**
   **ನಾವು ನಮ್ಮ ಉದ್ದೇಶ ಇತರರಿಗೆ ಸಾರುತ್ತಾ**
   **ಆಟವಾಡೋಡಣ, ಕೈ ಕುಲುಕಿ ವಿದಾಯ ಹೇಳೋಣ.**

   ಪಿಸುಧ್ವನಿಯಲ್ಲಿ ಒಬ್ಬೊರಿಗೊಬ್ಬರು ಶುಭರಾತ್ರಿ ಹೇಳುತ್ತಾ ಹಾರಿ ಹೋಗುವರು.

8. ಬುಲ್‌ಬುಲ್ ಚಿಕ್ಕ ವೃತ್ತದಲ್ಲಿ ಹಿಂದಕ್ಕೆ ಕೈ ಕಟ್ಟಿ ನಿಲ್ಲುವರು. ನಾಯಕಿ ಬಾಗಿಲ ಬಳಿ ನಿಲ್ಲುವರು. ನಂತರ ಒಂದು ವಸ್ತುವನ್ನು ಹಿಂದಿನಿಂದ ಕೊಡಲಾಗುವುದು. ಪ್ರತಿ ಬುಲ್‌ಬುಲ್ ಇದನ್ನು ಮುಟ್ಟಿ ಗುರುತಿಸಬೇಕು. ಬುಲ್‌ಬುಲ್ ವೃತ್ತ ಬಿಟ್ಟು ತನ್ನ ಚೀಲದೊಡನೆ ನಾಯಕಿಯ ಬಳಿಗೆ ಹೋಗಿ ತಾನು ಗುರುತಿಸಿದ್ದ ವಸ್ತುವಿನ ಹೆಸರನ್ನು ಹೇಳುವಳು. ಅವಳು ಊಹೆ ಸರಿಯಾಗಿದ್ದರೆ ಮನೆಗೆ ಕಳುಹಿಸುವರು. ಇಲ್ಲದಿದ್ದರೆ ಮತ್ತೊಮ್ಮೆ ಪ್ರಯತ್ನಿಸಲು ಹೇಳುವರು.

9. ಹಿಂಡಿನ ನಾಯಕಿ ಸಹನಾಯಕಿ / ಇಲ್ಲವಾದರೆ ಅಷ್ಟಕ ನಾಯಕಿಯರು ಮಾಯಾ ಸುರಂಗ ರಚಿಸುವರು. ಬುಲ್‌ಬುಲ್‌ಗಳು ತಮ್ಮ ಚೀಲದೊಂದಿಗೆ ಹಾದು ಹೋಗುವರು ನಂತರ ನಾಯಕಿ ವಿದಾಯ ಹೇಳುವರು.

10. ಬುಲ್‌ಬುಲ್‌ಳು ಬುಲ್‌ಬುಲ್ ವೃಕ್ಷಕ್ಕೆ ಪಿಸು ಮಾತಿನಲ್ಲಿ ತಾವು ನಾಳೆ ಯಾವ ಒಳ್ಳೆಯ ಕೆಲಸ ಮಾಡುವೆ ಎಂದು ಹೇಳಿ ಹಾರಿ ಹೋಗುವರು.

11. ಹಿಂಡಿನ ನಾಯಕಿ ಸಹನಾಯಕಿ ಕಮಾನು ಮಾಡುವರು. ಬುಲ್‌ಬುಲ್‌ಗಳು ಸಾಲಾಗಿ ಕಮಾನಿನಲ್ಲಿ ಹಾದು ಹೋಗುವರು. ನಂತರ "ಈಗ ವಿದಾಯ

ಹೇಳೋಣ ಬುಲ್‌ಬುಲ್ "ಆಗಲಿ, ಆಗಲಿ ಮತ್ತೆ ಭೇಟಿಯಾಗೋಣ". ಎಲ್ಲರೂ ಹೀಗೆ ಹೇಳುತ್ತಾ ಹೋಗುವರು.

## ಪದಕ ಪ್ರದಾನ

1. ಕೋಮಲ ಪಂಖ ಹೀರಕ್ ಪಂಖ ಬುಲ್‌ಬುಲ್‌ಗಳು ಹೊರಗಿನ ವೃತ್ತದಲ್ಲಿ ನಿಲ್ಲುವರು. ಒಳ ವೃತ್ತದಲ್ಲಿ ಉಳಿದ ಬುಲ್‌ಬುಲ್‌ಗಳು ನಿಂತು ರಿಬ್ಬನ್ ಅನ್ನು ರೆಕ್ಕೆ ಆಕಾರದಲ್ಲಿ ಹಿಡಿಯುವರು. ವೃತ್ತದಲ್ಲಿರುವ ಬುಲ್‌ಬುಲ್‌ಗಳು ಬಲಕ್ಕೆ ಎಡಕ್ಕೆ ಜಿಗಿಯುತ್ತಾ ಈ ಗೀತೆಯನ್ನು ಹಾಡುವರು.

   ನಮ್ಮ ರೆಕ್ಕೆಯಿಂದ ನಾವು ಸಂತಸವಾಗಿ ಹಾರುತ್ತೇವೆ.
   ಹಾಡುತ್ತೇವೆ ನೃತ್ಯ ಮಾಡುತ್ತೇವೆ ಆದರೆ ಮಾತ್ರ ಅಳುವುದಿಲ್ಲ.
   ನಾವು ನಮ್ಮ ಕೈಲಾದ ಮಟ್ಟಿಗೆ ಒಳ್ಳೆಯದನ್ನು ಮಾಡುತ್ತೇವೆ.
   ನಾವು ಜಿಗಿಯುತ್ತ ನಮ್ಮ ವೃತ್ತವನ್ನು ಸೇರುತ್ತೇವೆ.

ಈ ಹಾಡನ್ನು ಹಾಡಿ ಕೆಳಗೆ ಕುಳಿತು ಕೈಯನ್ನು ನೆಲಕ್ಕೆ ಇಟ್ಟು ರಿಬ್ಬನನ್ನು ಎಳೆದು ಹಿಡಿದು ರೆಕ್ಕೆಯ ಆಕೃತಿ ಪುಷ್ಪವಾಗಿ ಕಾಣುವಂತೆ ಹಿಡಿಯುವರು. ರೆಕ್ಕೆಯ ಮಧ್ಯದಿಂದ ಬುಲ್‌ಬುಲ್‌ಗೆ ಹಿಂಡಿನ ನಾಯಕಿ ಎಡ ಜೋಬಿನ ಮೇಲಿನ ಅಂಚಿನ ತುದಿ ತಾಗುವಂತೆ ಪದಕವನ್ನು ಚುಚ್ಚುವರು.

2. ಬುಲ್‌ಬುಲ್‌ಗಳು ಕಮಾನನ್ನು ರಚಿಸಿ ಪ್ರತಿ ಕಮಾನಿನಲ್ಲೂ ಒಂದೊಂದು ಹಂತದ ಹೆಸರು ಹಿಡಿದಿರುತ್ತಾರೆ. ಪದಕ ಪಡೆಯುವ ಬುಲ್‌ಬುಲ್ ಕಮಾನು ಹಾದು ಹೋಗುವಾಗ ಆಯಾ ಹಂತಕ್ಕೆ ಸಂಬಂಧಿಸಿದ ಒಂದು ಪ್ರಶ್ನೆಗೆ ಉತ್ತರ ಇಲ್ಲವೇ ಒಂದು ಕಿರು ಚಟುವಟಿಕೆ ಮಾಡುತ್ತಾ ಸಾಗಬೇಕು. ಕಮಾನುಗಳನ್ನು ದಾಟಿ ಬಂದಾಗ ರೆಕ್ಕೆಗಳ ಮಧ್ಯೆ ಇರುತ್ತಾಳೆ. ರೆಕ್ಕೆಗಳನ್ನು ಕತ್ತರಿಸಿ ಅಂಚಿಗೆ ಬಣ್ಣದ ಗೆರೆ ಹಾಕಿ. ರೆಕ್ಕೆ ಮಧ್ಯೆನಿಂತ ಬುಲ್‌ಬುಲ್‌ಗೆ ಹಿಂಡಿನ ನಾಯಕಿ ಪದಕವನ್ನು ಎಡ ಜೇಬಿನ ಮೇಲಿನ ಅಂಚಿನ ತುದಿ ತಾಗುವಂತೆ ಚುಚ್ಚುವರು.

ಪದಕವನ್ನು ಚುಚ್ಚಿದ ನಂತರ "ನಾನು ಈ ಪದಕ ಪಡೆಯಲು ಕಲಿತ ಎಲ್ಲವನ್ನು ಅಭ್ಯಾಸ ಮಾಡುತ್ತೇನೆ" ಎಂದು ಹೇಳುವಳು..... ಪದಕ ನೀಡುವ ಮುನ್ನ ಬುಲ್‌ಬುಲ್ ಪ್ರತಿಜ್ಞೆಯನ್ನು ಹೇಳಬೇಕು. ಈ ಸಮಾರಂಭಕ್ಕೆ ಪೋಷಕರನ್ನು ಆಹ್ವಾನಿಸಿ ಒಳ್ಳೆ ಮಾತು ಹೇಳಿ, ಸಿಹಿ ಹಂಚಿ.

## ಹಾರುವ ಸಮಾರಂಭ

ಸುವರ್ಣ ಪಂಖ ಪಡೆದ ಬುಲ್‌ಬುಲ್ ಗೈಡ್ ದಳಕೆ ಹಾರಿ ಹೋಗುವ ಸಮಾರಂಭ ಇದು. ಹೃದಯ ಸ್ಪರ್ಶಿ ವಿದಾಯ ಸಮಾರಂಭ. ಈ ಸಮಾರಂಭ ವೈವಿಧ್ಯಯಮವಾಗಿ ಮಾಡಬಹುದು ಮಾಡುವ ಮುನ್ನ ಹಿಂಡಿನ ಸಭೆಯಲ್ಲಿ ಚರ್ಚಿಸಬೇಕು, ಇದರಿಂದ ಸಮಾರಂಭದ ವಿಧಾನ ಹಾಗು ಆಡಬೇಕಾದ ಮಾತು ನಿಖರವಾಗಿರಬೇಕು.

1. ಬುಲ್‌ಬುಲ್‌ಗಳು ಬುಲ್‌ಬುಲ್ ಮರದ ಸುತ್ತ ವೃತ್ತದಲ್ಲಿ ನಿಲ್ಲುವರು ಮತ್ತೊಂದು ತುದಿಯಲ್ಲಿ ಲಾಳಾಕೃತಿ ಮಾಡಿ ಗೈಡ್ ದಳ ನಿಲ್ಲುವುದು. ಗೈಡಿಗೆ ಹಾರಿ ಹೋಗುವ ಬುಲ್‌ಬುಲ್‌ಗಳನ್ನು ವೃಕ್ಷದ ಬಳಿ ಕರೆಯುವರು, ನಿನಗೀಗ ಸಮಯ ಬಂದಿದೆ ರೆಕ್ಕೆ ಬಿಚ್ಚಿ ಗೈಡ್ ದಳಕ್ಕೆ ಹಾರಬೇಕಿವೆ. ಹಿಂಡಿನಲ್ಲಿ ಸಾಕಷ್ಟು ಕಲಿತಿದ್ದೀಯೆ, ಇನ್ನೂ ಕಲಿಯುವ ಇಚ್ಛೆ ಇದೆಯೆ?

**ಬುಲ್‌ಬುಲ್ :** "ಹೌದು ನಾಯಕಿಯವರೆ".

**ಹಿಂಡಿನ ನಾಯಕಿ :** "ಹೋಗು ಪ್ರಗತಿಯತ್ತ ಸಾಗು. ನಿನ್ನೊಡನೆ ಹಿಂಡಿನ ಸದ್ಭಾವನೆ ಸಾಗಲಿ". ಹೀಗೆ ಹೇಳುತ್ತಾ ರೆಕ್ಕೆಯನ್ನು ಹಾಕಲಾಗುವುದು. ಬುಲ್‌ಬುಲ್‌ಳಿಗೆ ಬುಲ್‌ಬುಲ್‌ನಾದ್/ಸೆಲ್ಯೂಟ್ ಕೊಡಲಾಗುವುದು. ನಂತರ ವೃತ್ತ ದಾಟಿ ಲಾಳಾಕೃತಿ ಪ್ರವೇಶಿಸುವಳು. ಅಲ್ಲಿ ಗೈಡ್ ನಾಯಕಿ ಸ್ವಾಗತಿಸುವಳು, "ಓ ಯಾರು ಇಲ್ಲಿಗೆ ಬಂದಿದ್ದಾರೆ?"

**ಬುಲ್‌ಬುಲ್ :** "ನಾನು ಬುಲ್‌ಬುಲ್".

**ಗೈಡ್ ನಾಯಕಿ :** ಯಾವ ಮಾಯದಿಂದ ನೀನಿಲ್ಲಿಗೆ ಬಂದೆ?

**ಬಲ್‌ಬುಲ್ :** ನನ್ನ ಬುಲ್‌ಬುಲ್ ರೆಕ್ಕೆಯ ಮಾಯದಿಂದ ಬಂದೆ.

**ಗೈಡ್ ನಾಯಕಿ :** ನಾವು ನಿನ್ನನ್ನು ದಳಕ್ಕೆ ಸ್ವಾಗತಿಸುತ್ತೇವೆ. ದಯವಿಟ್ಟು ನಮ್ಮ ದಳವನ್ನು ಭೇಟಿಯಾಗು. ಎಲ್ಲರೂ ಪರಸ್ಪರ ವಂದಿಸುತ್ತಾ ಸ್ವಾಗತಿಸುವರು.

2. ಬುಲ್‌ಬುಲ್ ಗೈಡ್ ದಳಕ್ಕೆ ಬರುವ ಮುನ್ನ ಬುಲ್‌ಬುಲ್ ಹಂತಗಳ ಕಮಾನಿನ ಮೂಲಕ ಹೋಗುವಂತೆ ಮಾಡಬಹುದು.

   ಇದು ಬುಲ್‌ಬುಲ್ ಬಗೆಗಿನ ಪುನರಾವರ್ತನೆಯಾಗುತ್ತದೆ.

3. ಬುಲ್‌ಬುಲ್ ಮತ್ತು ಗೈಡ್ ದಳಕ್ಕೆ ಮಧ್ಯೆ ಅಲಂಕರಿಸಿದ ದ್ವಾರವನ್ನು ನಿರ್ಮಿಸಬೇಕು.

**ಬುಲ್‌ಬುಲ್ :** ಇದು ಏನು? ಈ ದಾರಿ ಎಲ್ಲಿಗೆ ಹೋಗುತ್ತದೆ?

**ಹಿಂಡಿನ ನಾಯಕಿ :** ಈ ದಾರಿ ಬುಲ್‌ಬುಲ್‌ನ ಮುಂದಿನ ಪ್ರದೇಶವಾದ ಗೈಡಿಂಗ್‌ಗೆ ಸಾಗುತ್ತದೆ.

**ಬುಲ್‌ಬುಲ್ :** ಆ ಪ್ರದೇಶ ನಮ್ಮನ್ನು ಎಲ್ಲಿಗೆ ಕೊಂಡೊಯ್ಯುತ್ತದೆ.

**ಹಿಂಡಿ ನಾಯಕಿ :** "ವಿಶಾಲವಾದ ವಿಸ್ಮಯಕಾರಿ ಜಗತ್ತಿಗೆ ಕೊಂಡೊಯ್ಯುತ್ತದೆ. ನೀವು ಗೈಡ್ ಸೇರಿದಾಗ ವೃತ್ತ ಬಿಟ್ಟು ಮುಕ್ತ ಲಾಳಾಕೃತಿ ಸೇರುವಿರಿ. ಅಲ್ಲಿ ಕೆಲಸ ಮಾಡಲು ಕರ್ತವ್ಯ ಪಾಲಿಸಲು ಸದಾ ಸಿದ್ಧರಾಗುವಿರಿ. ಬುಲ್‌ಬುಲ್ ಹಿಂಡಿಗೂ ಸಹಾಯ ಮಾಡುವಿರಿ".

**ಬುಲ್‌ಬುಲ್ :** ಬಹಳ ಸಂತೋಷವಾಗುತ್ತಿದೆ. ನಾನು ಅವರನ್ನು ಸೇರಲು ಕಾತುರಳಾಗಿದ್ದೇನೆ.

**ಹಿಂಡಿನ ಹಾಡು:**

**ವಿದಾಯ ಹೇಳುವ ಸಮಯ ಬಂದಿದೆ**
**ವೃತ್ತ ತೆರೆದು ಹಾರು ನೀ ಹಾರು ನೀ**

ಬುಲ್‌ಬುಲ್ ವಿದಾಯ ಹೇಳುತ್ತಾ ತನ್ನವರನ್ನು ಅಗಲುವ ನೋವಿನಿಂದ ಗೈಡ್‌ಗಳನ್ನು ಸೇರುವ ಹರ್ಷದಿಂದ ಕಮಾನಿನ ಮೂಲಕ ಹಾರಿ ಹೋಗುವಳು.

## ವಿದಾಯ ಸಮಾರಂಭ

ಇದು ಸಹ ಬುಲ್‌ಬುಲ್‌ನಿಂದ ಗೈಡ್‌ಗೆ ಹೋಗುವ ಸಮಾರಂಭ. ಆದರೆ ಇವರು ಹೀರಕ್ ಪಂಖ ಪಡೆದಿರುವುದಿಲ್ಲ. 10 ವರ್ಷ ವಯಸ್ಸು ತುಂಬಿರುತ್ತದೆ.

ಹಾರುವ ಸಮಾರಂಭದಂತೆ ಈ ಸಮಾರಂಭವನ್ನು ನಡೆಸಲಾಗುವುದು. ಬುಲ್‌ಬುಲ್ ವೃತ್ತದಿಂದ ಬುಲ್‌ಬುಲ್‌ಗಳಿಗೆ ವಿದಾಯ ಹೇಳುತ್ತಾ ಕಮಾನಿನ ಮೂಲಕ ಹಾದು ಹೋಗಿ ಗೈಡ್‌ನ ಲಾಳಾಕೃತಿ ಸೇರುವಳು. ಗೈಡ್ ನಾಯಕಿ ಮತ್ತು ಮಕ್ಕಳು ಅವಳನ್ನು ಸ್ವಾಗತಿಸುವರು.

ಈ ಸಮಾರಂಭ ಒಂದೇ ಶಾಲೆಯಲ್ಲಿ ಬುಲ್‌ಬುಲ್ ಹಿಂಡು ಮತ್ತು ಗೈಡ್‌ದಳಗಳಿದ್ದರೆ ನಡೆಸಲಾಗುವುದು. ಮುಕ್ತದಳಗಳಲ್ಲಿ ಸಾಮಾನ್ಯವಾಗಿ ಬುಲ್‌ಬುಲ್ ಹಿಂಡು ಮತ್ತು ಗೈಡ್‌ದಳವಿರುವುದರಿಂದ ನಡೆಸಲಾಗುವುದು.

ಈ ಸಮಾರಂಭ ಹೃದಯಸ್ಪರ್ಶಿಯಾಗಿರುವುದು. ಇದಕ್ಕೆ ಪೋಷಕರನ್ನು ಆಹ್ವಾನಿಸಬಹುದು.

## ಪ್ರಾವೀಣ್ಯತಾ ಪದಕಗಳು

ಬುಲ್‌ಬುಲ್ ಕಾರ್ಯಕ್ರಮದಲ್ಲಿ ನಿಗದಿ ಪಡಿಸಿದ ವಿಷಯಗಳಲ್ಲಿ ಹೆಚ್ಚಿನ ಅರಿವು ಮತ್ತು ಕೌಶಲಗಳನ್ನು ಗಳಿಸಿ ಪ್ರಾವೀಣ್ಯತಾ ಪದಕವನ್ನು ಪಡೆಯುವರು. ಚಾರಿತ್ರ್ಯ, ಆರೋಗ್ಯ, ಕರಕೌಶಲ, ಸೇವೆ ಮತ್ತು ವಿಶ್ವ ಸಂರಕ್ಷಣೆ ಎಂಬ ಐದು ಮೂಲ ಅಂಶಗಳ ಮೇಲೆ ಪದಕಗಳನ್ನು ರಚಿಸಲಾಗಿದೆ.

**ಗುಂಪು–1 ಚಾರಿತ್ರ್ಯ :** ಸಂಗ್ರಹಕಿ, ಮನೋರಂಜಕಿ, ವೀಕ್ಷಕಿ ಇದರ ಪದಕದ ಬಣ್ಣ ಕಾಕಿ, ಅಂಚು ಮತ್ತು ಪದಕ ಲಾಂಛನ ನೀಲಿ ಬಣ್ಣ.

**ಗುಂಪು–2 ಆರೋಗ್ಯ :** ಆಟೋಟಗಾತಿ, ಸೈಕಲ್ ಸವಾರಕಿ, ತಂಡ ಕ್ರೀಡಾಪಟು. ಇದರ ಪದಕದ ಬಣ್ಣ ಕಾಕಿ, ಅಂಚು ಮತ್ತು ಪದಕ ಲಾಂಛನದ ಬಣ್ಣ ಹಸಿರು.

**ಗುಂಪು–3 ಕರಕೌಶಲ :** ಕಲಾಕಾರ್ತಿ, ಗೃಹಕುಶಲಿ, ಕಸೂತಿ, ಆಟಿಕೆ ತಯಾರಿಕಿ. ಇದರ ಪದಕದ ಬಣ್ಣ ಕಾಕಿ, ಅಂಚು ಮತ್ತು ಪದಕದ ಲಾಂಛನದ ಬಣ್ಣ ಹಳದಿ.

**ಗುಂಪು–4 ಸೇವೆ :** ಅಡಿಗೆ, ಪ್ರಥಮ ಚಿಕಿತ್ಸತಿ, ಮಾರ್ಗದರ್ಶಿ, ಮನೆ ಕೆಲಸ, ಈ ಪದಕದ ಬಣ್ಣ ಕಾಕಿ, ಅಂಚು ಮತ್ತು ಪದಕ ಲಾಂಛನದ ಬಣ್ಣ ಕೆಂಪು.

**ಗುಂಪು–5 ವಿಶ್ವ ಸಂರಕ್ಷಣೆ :** ಪರಂಪರೆ, ವಿಶ್ವ ಸಂರಕ್ಷಣೆ, Computer Ownership & Technology.

ಗುನೀನಿಸಂ ಪುಟ 25ರಿಂದ 30ರವರೆಗೆ :

ಗುನೀನಿಸಂ ಪುಟ 33 ಬಂಗಾರದ ಬಾಣ.

ಹಿಂಡಿನ ನಾಯಕಿ ಹಿಂಡಿನ ವ್ಯವಹಾರ ಹಾಗು ಕಾರ್ಯ ವಿವರದ ದಾಖಲೆಗಳನ್ನು ಇಡಬೇಕು. ಇದರಿಂದ ನಾಯಕಿಯ ಕಾರ್ಯಕ್ರಮ ಬದ್ಧವಾಗಿ ಸುಗಮವಾಗಿ ನಡೆಯುತ್ತದೆ. ನಂತರ ಬರುವ ನಾಯಕಿಗೆ ಮಾರ್ಗದರ್ಶನವಾಗುತ್ತದೆ. ಈ ದಾಖಲೆಗಳನ್ನು ನೋಡಿದಾಗ ಹಿಂಡಿನ ಗುಣಮಟ್ಟ ತಿಳಿಯುತ್ತದೆ. ನಿಮ್ಮ ಕಾರ್ಯದಕ್ಷತೆಯನ್ನು ತಿಳಿಸುತ್ತದೆ. ದಾಖಲಿಸಲು ಸ್ವಲ್ಪ ಸಮಯ ವ್ಯಯ ಮಾಡಬೇಕಾಗುತ್ತದೆ. ಆದರೆ ಅದರ ಪ್ರತಿಫಲ ಅಪಾರ.

1. ಪೋಷಕರ ಅನುಮತಿ ತಖ್ತೆ
2. ಹಾಜರಿ ಪುಸ್ತಕ
3. ಬಿಡಿಹಾಳೆ ತಖ್ತೆ
4. ದಾಖಲಾತಿ ಪುಸ್ತಕ
5. ಲೆಕ್ಕ ಪುಸ್ತಕ
6. ವ್ಯವಹಾರ ತಖ್ತೆ
8. ದಾಸ್ತಾನು ಪುಸ್ತಕ
9. ಹಿಂಡಿನ ದಿನಚರಿ ಪುಸ್ತಕ
10. ಸಂದರ್ಶಕರ ಪುಸ್ತಕ

**ಪೋಷಕರ ಅನುಮತಿ ತಖ್ತೆ:** ಮಕ್ಕಳನ್ನು ಹಿಂಡಿಗೆ ಸೇರಿಸುವ ಮುನ್ನ ಸುರಕ್ಷತೆಯ ದೃಷ್ಟಿಯಿಂದ ಪೋಷಕರ ಅನುಮತಿ ಪತ್ರ ಪಡೆಯಬೇಕು.

**ನಮೂನೆ**

ದಿನಾಂಕ :..........................

ಆದರಣೀಯ ಹಿಂಡಿನ ನಾಯಕಿಯವರೇ,

ನನ್ನ ಮಗಳಾದ ______________ ಬುಲ್‌ಬುಲ್ ಹಿಂಡಿಗೆ ಸೇರಲು ಉತ್ಸುಕಳಾಗಿದ್ದಾಳೆ. ಅವಳ ಬುಲ್‌ಬುಲ್ ಚಟುವಟಿಕೆಗಳಲ್ಲಿ ನಾನು ಸಂಪೂರ್ಣ ಸಹಕಾರ ನೀಡುತ್ತೇನೆ. ಅವಳನ್ನು ಸೇರಿಸಿಕೊಳ್ಳಬೇಕಾಗಿ ಕೋರುತ್ತೇನೆ.

ಸಾದರ ವಂದನೆಗಳು.

ಪೋಷಕರ ಸಹಿ/–

**ಹಾಜರಿ ಪುಸ್ತಕ**

ಇದು ಹಿಂಡಿನ ಶಿಸ್ತು ಕಾಪಾಡಲು ಬಹಳ ಮುಖ್ಯ. ಷಟ್ಕ ನಾಯಕಿ ಬಳಿ ಷಟ್ಕ ಹಾಜರಿ ಪುಸ್ತಕ ಇರಬೇಕು. ಹಿಂಡಿನ ನಾಯಕಿ ಬಳಿ ಸಂಪೂರ್ಣ ಹಿಂಡಿನ ಹಾಜರಿ ಪುಸ್ತಕ ಇರಬೇಕು. ಪ್ರತಿ ಹಿಂಡಿನ ಸಭೆಯಲ್ಲೂ ಹಾಜರಿ ಹಾಕಬೇಕು.

**ಬಿಡಿಹಾಳೆ ತಖ್ತೆ :** ಇದು ರಾಜ್ಯ ಕಛೇರಿಯಲ್ಲಿ ದೊರೆಯುತ್ತದೆ. ಪ್ರತಿ ಹುಡುಗಿಯ ವೈಯಕ್ತಿಕ ಹಾಗು ಪ್ರಗತಿ ವಿವರಗಳನ್ನು ಇದರಲ್ಲಿ ಭರ್ತಿ ಮಾಡಬೇಕು. ಇದರಿಂದ ಒಂದೇ ನೋಟದಲ್ಲಿ ಬುಲ್‌ಬುಲ್ ಪ್ರಗತಿಯ ವಿವರ ಸಿಗುತ್ತದೆ.

**ಕಾರ್ಯಕ್ರಮ ಪುಸ್ತಕ :** ಪ್ರತಿವಾರದ ಕಾರ್ಯಯೋಜನೆಯನ್ನು ದಿನಾಂಕ ಸಹಿತ ಇದರಲ್ಲಿ ಬರೆಯಬೇಕು. ಪ್ರತಿ ಕಾರ್ಯಯೋಜನೆಯ ಮುಂದೆ ನಡೆಸುವ ಹಿಂಡಿನ ನಾಯಕಿಯ ಸಹಿ ಇರಬೇಕು. ಕೊನೆಯಲ್ಲಿ ಷರಾ ಬರೆಯಲು ಅವಕಾಶವಿರಬೇಕು. ಬದಲಾವಣೆ, ಪೂರ್ಣಮಾಡದಿರಲು, ಮುಂದೂಡಿಕೆಗೆ ಕಾರಣ ಇತ್ಯಾದಿ ನಮೂದಿಸಬಹುದು.

ಇದನ್ನು ನೋಡಿದಾಗ ಏನೇನು ಆಗಿದೆ ಏನು ಮಾಡಬೇಕೆಂಬುದು ನಾಯಕಿಗೆ ಸ್ಪಷ್ಟವಾಗಿ ತಿಳಿಯುತ್ತದೆ. ಜೊತೆಗೆ ಮೂಲ ಸಿದ್ಧಾಂತದಲ್ಲಿ ಬಿ.ಪಿ.ಯವರು ಹೇಳಿದ ನಾಲ್ಕು ಆಧಾರಾಂಶ (Sign Post) ಚಾರಿತ್ರ್ಯ, ಆರೋಗ್ಯ, ಕರಕೌಶಲ ಮತ್ತು ಸೇವೆ ಇವುಗಳನ್ನು ಎಷ್ಟರ ಮಟ್ಟಿಗೆ ಸಾಧಿಸಿದ್ದಾರೆಂದು ತಿಳಿಯುತ್ತದೆ.

**ಲೆಕ್ಕ ಪುಸ್ತಕ:** ಪ್ರತಿ ತಿಂಗಳು ಆಯವ್ಯಯದ ವಿವರ ಇದರಲ್ಲಿ ದಾಖಲಿಸಬೇಕು. ಕೊಂಡದ್ದಕ್ಕೆ ಕೊಟ್ಟಿದ್ದಕ್ಕೆ ರಸೀದಿಗಳಿರಬೇಕು. ಬಂದ ಹಣಕ್ಕೆ ಮೂಲ ದಾಖಲೆ ಇರಬೇಕು. ಹಣ ಎಲ್ಲರದ್ದು, ಹಿಂಡಿನದ್ದು ಆದ್ದರಿಂದ ಪ್ರತಿ ಪೈಸೆಯ ಲೆಕ್ಕವೂ ಮುಖ್ಯ.

**ವ್ಯವಹಾರ ತಖ್ತೆ :** ಸ್ಥಳೀಯ, ಜಿಲ್ಲೆ ಹಾಗೂ ರಾಜ್ಯ ಸಂಸ್ಥೆಗಳಿಂದ ಸುತ್ತೋಲೆಗಳು ಬರುತ್ತವೆ. ಅವುಗಳನ್ನು ಜೋಪಾನವಾಗಿ ಜೋಡಿಸಿರಬೇಕು. ಸುತ್ತೋಲೆ, ಸೂಚನೆ, ಆಹ್ವಾನ, ಮನವಿ, ಸ್ವೀಕರಿಸಿದ ದಿನಾಂಕ ಹಾಕಿ ಸಹಿ ಮಾಡಿ ಇಡಿ. ಇವುಗಳಿಗೆ ಉತ್ತರಿಸಬೇಕಾದ ಸಂದರ್ಭದಲ್ಲಿ ಉತ್ತರಿಸಿ ಅದರ ಒಂದು ಪ್ರತಿಯನ್ನು ತಖ್ತೆಯಲ್ಲಿ ಹಾಕಿಡಿ. ಈ ದಾಖಲೆಗಳು ಮುಂದಿನ ವ್ಯವಹಾರಕ್ಕೆ ಆಧಾರವಾಗಿರುತ್ತವೆ.

**ದಾಸ್ತಾನು ಪುಸ್ತಕ :** ಹಿಂಡಿನ ಆಸ್ತಿಯ ಸಮಸ್ತ ವಿವರವಿರಬೇಕು. ಕೊಂಡ ಅಥವಾ ದಾನ ಪಡೆದ ದಿನಾಂಕ, ವಸ್ತುಗಳ ಹೆಸರು ವಿವರ ಕೊಂಡ ವಿಳಾಸ / ದಾನ ಕೊಟ್ಟವರ ವಿಳಾಸ ದಾಖಲಿಸಿ ಸಹಿ ಹಾಕಿ.

**ದಿನಚರಿ ಪುಸ್ತಕ (log Book)**

ಇದರಲ್ಲಿ ನಿಮ್ಮ ಕಾರ್ಯಕ್ರಮಗಳ ದಿನಚರಿ, ಸತ್ಯ ಘಟನೆ, ಅನುಭವಗಳು ಇರುತ್ತವೆ. ಇದು ನಿಮ್ಮ ಹಿಂಡಿನ ಸಮಗ್ರ ಕಥೆಯಾಗಿರುತ್ತದೆ. ಇದರ ಜೊತೆಗೆ ನಿಮ್ಮ

ಕಾರ್ಯಕ್ರಮಗಳ ಚಿತ್ರೀಕರಣ, ಭಾವಚಿತ್ರಗಳನ್ನು ಅಂಟಿಸಬಹುದು. ಇದನ್ನು ತಯಾರಿಸುವುದು ಒಂದು ಮಜವಾದರೆ ಇದರ ಪುಟ ತಿರುಗಿಸಿ ಹಿಂದಕ್ಕೆ ನೋಡುವುದು ಮತ್ತೊಂದು ಮಜ.

**ಸಂದರ್ಶಕರ ಪುಸ್ತಕ :** ಸಂದರ್ಶಕರಿಗೆ ಮೀಸಲಾದ ಪುಸ್ತಕ. ಅವರು ಕಾರ್ಯಕ್ರಮ ನೋಡಿದ ನಂತರ ಅಥವಾ ದಾಖಲೆಗಳನ್ನು ನೋಡಿದ ನಂತರ ತಮ್ಮ ಮೆಚ್ಚುಗೆ ಅಥವಾ ಅಭಿಪ್ರಾಯವನ್ನು ಬರೆಯಬಹುದು.



# 9. ಹಿಂಡಿನ ವೈಶಿಷ್ಟ್ಯಗಳು: ಬುಲ್‌ಬುಲ್‌ನಾದ್

ಬುಲ್‌ಬುಲ್ ಅರೆ ಬಲಕ್ಕೆ ತಿರುಗಿ ವೃತ್ತದಲ್ಲಿ ನಿಲ್ಲುತ್ತಾರೆ. ಹಿಂಡಿನ ನಾಯಕಿಯರು ವೃತ್ತವನ್ನು ಸೇರಿಕೊಳ್ಳುತ್ತಾರೆ. ಬುಲ್‌ಬುಲ್ ಒಮ್ಮೆ ಹಾರಿ ನೆಲದ ಮೇಲೆ ಮಂಡಿಯೂರಿ ಕುಳಿತು ಬಿಲ್ಲು ಬಾಣ ಹಿಡಿದಂತೆ ನಟನೆ ಮಾಡುತ್ತಾರೆ.

ಬಲಗೈಯಿಂದ ಬಾಣದ ಹಗ್ಗ ಎಳೆಯುವಂತೆ ನಟಿಸುತ್ತಾ ಎರಡನೆ ಆಜ್ಞೆಗೆ ಆಚಾರ್ಯ ನಾವು ಮನಸ್ಸು ಮಾಡಿ ಪ್ರಯತ್ನಿಸುತ್ತೇವೆ" ಎನ್ನುತ್ತಾರೆ. ಕೊನೆ ಶಬ್ದ ಉಚ್ಚರಿಸುವಾಗ ಅದೇ ಸ್ಥಿತಿಯಲ್ಲಿ ಎದ್ದು ನಿಲ್ಲುತ್ತಾರೆ. ಹಿಂಡಿನ ನಾಯಕಿ "ಪ್ರಯತ್ನಿಸಿ ಪ್ರಯತ್ನಿಸಿ ಪ್ರಯತ್ನಿಸಿ" ಎನ್ನುತ್ತಾರೆ. ಬುಲ್‌ಬುಲ್ "ಮಾಡುತ್ತೇವೆ ಮಾಡುತ್ತೇವೆ ಮಾಡುತ್ತೇವೆ" ಎನ್ನುತ್ತಾರೆ. ಕೊನೆಯ ಶಬ್ದಕ್ಕೆ ಸರಿಯಾಗಿ ಬಿಲ್ಲನ್ನು ತಗ್ಗಿಸಿ ಆಚಾರ್ಯರ ಪಾದಕ್ಕೆ ಬಾಣ ಬಿಡುವಂತೆ ನಟಿಸುವುದರ ಮೂಲಕ ಗುರು ನಮನ ಸಲ್ಲಿಸಿ ವಂದಿಸುತ್ತಾರೆ.

**ಗಮನಿಸಿ :** ಹಿಂಡಿನ ನಾಯಕಿ ಎಲ್ಲಾ ಸಂದರ್ಭದಲ್ಲೂ ಗೈಡ್ ಸೆಲ್ಯೂಟ್ (ಮೂರು ನೇರ ಬೆರಳ ವಂದನೆ) ಮಾಡಬೇಕು.

**ಹಿಂಡಿನ ರಜಾಮಜಾ**

ಹಿಂಡಿನ ರಜಾ ದಿನ ಬುಲ್‌ಬುಲ್ ಮಕ್ಕಳು ಒಟ್ಟಾಗಿ ಸೇರಿ ಮಜಾ ಮಾಡಲು ಮುಕ್ತವಾಗಿರಲು ಒಂದು ಅವಕಾಶ. ಎಲ್ಲರೂ ಒಟ್ಟಾಗಿ ಒಂದೇ ಮನೆಯವರಂತೆ ಇರುತ್ತಾರೆ. ಒಬ್ಬರನ್ನೊಬ್ಬರು ಹೊಂದಾಣಿಕೆ ಮಾಡಿಕೊಳ್ಳುತ್ತಾರೆ. ತಮ್ಮ ಹಾಗು ತಮ್ಮ ವಸ್ತುಗಳ ಬಗ್ಗೆ ಕಾಳಜಿ ವಹಿಸುತ್ತಾರೆ. ಚಟುವಟಿಕೆಗಳನ್ನು ವೀಕ್ಷಿಸುತ್ತಾರೆ. ತಮ್ಮ ಪಾಲಿಗೆ ಬಂದ ಕೆಲಸ ಮಾಡುತ್ತಾರೆ. ತನ್ನ ಗುಂಪಿನಲ್ಲಿದ್ದಾಗ ಬುಲ್‌ಬುಲ್‌ಗೆ ಸಂಪೂರ್ಣ ಸಂತಸ ಮತ್ತು ತೃಪ್ತಿ ಇರುತ್ತದೆ. ಇದರಿಂದ ನಾಯಕಿಗೆ ಬುಲ್‌ಬುಲ್‌ಗಳ ಬಗ್ಗೆ ಹೆಚ್ಚು ಹೆಚ್ಚು ತಿಳಿಯುತ್ತದೆ. ಬುಲ್‌ಬುಲ್‌ಗಳಿಗೆ ಎಲ್ಲಿ ಬೇಕೋ ಅಲ್ಲಿ ಸಹಾಯ ಮಾಡಲು ಅನುಕೂಲವಾಗುತ್ತದೆ. ಬುಲ್‌ಬುಲ್‌ಗಳಿಗೆ ಈ ಕಾರ್ಯಕ್ರಮ ಹೆಚ್ಚು ಹೆಚ್ಚು ಅನುಭವ ನೀಡುತ್ತದೆ. ಒಂದು ವರ್ಷ ಬುಲ್‌ಬುಲ್ ಆಗಿ ಕೆಲಸ ಮಾಡಿ ನಂತರ ಈ ಕಾರ್ಯಕ್ರಮಕ್ಕೆ ಹೋದರೆ ಹೆಚ್ಚು ಲಾಭಕರ. ನಾಯಕಿ ಮಕ್ಕಳೊಡನೆ ಎಲ್ಲ ನೋವು ನಲಿವಿನ ಅನುಭವಗಳನ್ನು ಹಂಚಿಕೊಳ್ಳಬೇಕು.

ಬುಲ್‌ಬುಲ್‌ಗಳನ್ನು ಕರೆದುಕೊಂಡು ಹೋಗುವ ಮುನ್ನ ನಾಯಕಿ ಸ್ಥಳ ನಿರ್ಧರಿಸಬೇಕು. ಅದರ ಪರಿಚಯವಿರಬೇಕು. ಶಾಲೆಯ, ಪೋಷಕರ ಜಿಲ್ಲಾ ಆಯುಕ್ತೆ (ಗೈ) ಅನುಮತಿ ಪಡೆಯಬೇಕು. ಸ್ಥಳದ ಯಜಮಾನ/ಅಧಿಕಾರಿಗಳ ಅನುಮತಿ ಪಡೆಯಬೇಕು. ಪ್ರಯಾಣ, ಉಟೋಪಹಾರ, ಅವಶ್ಯಕ ವಸ್ತುಗಳು, ಬುಲ್‌ಬುಲ್‌ಗಳು ತರಬೇಕಾದ ವಸ್ತುಗಳು, ಕಾರ್ಯಕ್ರಮಗಳ ಯೋಜನೆ ನಿಖರವಾಗಿ ಮಾಡಬೇಕು. ಎಲ್ಲಾ ಹಂತದಲ್ಲೂ ಸುರಕ್ಷತೆಯನ್ನು ಗಮನದಲ್ಲಿಟ್ಟುಕೊಳ್ಳಬೇಕು. ಕಾರ್ಯ ಯೋಜನೆಯನ್ನು ಮುಂದಾಗಿ ಪೋಷಕರಿಗೆ, ಶಾಲೆಗೆ ಮತ್ತು ಆಯುಕ್ತರಿಗೆ ನೀಡಬೇಕು. ಪೋಷಕರು ಅಥವಾ ಹಿತೈಷಿಗಳನ್ನು ಸಹಾಯಕ್ಕೆ ಕರೆದುಕೊಳ್ಳಬಹುದು.

ಆಡಲು ಅಂಗಳವಿರುವ ಕಟ್ಟಡಗಳಲ್ಲಿ ಈ ಕಾರ್ಯಕ್ರಮ ಏರ್ಪಡಿಸಬಹುದು.

## ಬುಲ್‌ಬುಲ್‌ಗಳ (ಸಮಾವೇಶ) ಉತ್ಸವ

ಇದನ್ನು ಸ್ಥಳೀಯ ಅಥವಾ ಜಿಲ್ಲಾ, ರಾಜ್ಯ ಸಂಸ್ಥೆ ಏರ್ಪಡಿಸುತ್ತಾರೆ. ಇದರಿಂದ ಬುಲ್‌ಬುಲ್ ಮಕ್ಕಳು ಒಟ್ಟಾಗಿ ಸೇರಿ ಸಂತಸವನ್ನು ಹಂಚಿಕೊಳ್ಳುತ್ತಾರೆ. ಸ್ನೇಹ ಬೆಳೆಸುತ್ತಾರೆ, ಇದರಿಂದ ಸ್ನೇಹ ವಿಸ್ತರಿಸುತ್ತದೆ ಎಂದು ನಾಯಕಿಯರು ಭಾವಿಸುತ್ತಾರೆ. ಇದು ಒಂದು ಭವ್ಯವಾದ ಹೊರ ಸಂಚಾರ.

ಈ ಕಾರ್ಯಕ್ರಮ ಆಯೋಜಿಸಲು ಸಂಸ್ಥೆ ಒಂದು ಸಮಿತಿ ರಚಿಸುತ್ತದೆ.

ಇದನ್ನು ಏರ್ಪಡಿಸುವಾಗ ನೆನಪಿನಲ್ಲಿಡಬೇಕಾದ ಅಂಶಗಳು.

1. ಮುಂದಾಗಿ ನಿರೀಕ್ಷಿತ ಸಂಖ್ಯೆಗೆ ಬೇಕಾಗುವಷ್ಟು ಸ್ಥಳ.
2. ದಿನಾಂಕ ಮತ್ತು ಅವಧಿ.
3. ಇದಕ್ಕೊಂದು ಉದ್ದೇಶ.
4. ಆಹಾರ ಮತ್ತು ಕುಡಿಯುವ ನೀರಿನ ವ್ಯವಸ್ಥೆ.
5. ಸಾರಿಗೆ ವ್ಯವಸ್ಥೆ.
6. ಉದ್ದೇಶಕ್ಕೆ ಅನುಗುಣವಾಗಿ ಕಾರ್ಯಕ್ರಮ ಯೋಜನೆ.
7. ಸಹಾಯಕರ ತಂಡ.
8. ಮುಂದಾಗಿ ಕಾರ್ಯಕ್ರಮ ವಿವರ ರವಾನೆ.
9. ಸಮಯ ನಿರ್ವಹಣೆ.

10. ಅತಿಥಿಗಳು

11. ತಂಗುವ ವ್ಯವಸ್ಥೆ

12. ಸಾಕಷ್ಟು ವಿಶ್ರಾಂತಿ ಉಟೋಪಹಾರಕ್ಕೆ ಸಮಯ

13. ವಲಯಗಳ ಪಟ್ಟಿ (Base) ಕಾರ್ಯಕ್ರಮ ನಡೆಸುವುದು.

14. ಹಿತೈಷಿಗಳನ್ನು ಪೋಷಕರನ್ನು ಕರೆಯುವುದನ್ನು ಮರೆಯಬೇಡಿ.

15. ಎಲ್ಲರಿಗೂ ವಂದಿಸುವ ಅವಕಾಶ ಬುಲ್‌ಬುಲ್‌ಗಳಿಗೆ ನೀಡಿ.

**ಓ ನಾಯಕಿಯರೆ! ಹಿಂಡಿನ ನಾಯಕಿಯರೆ!**
**ಕೆಲವೊಂದು ಹೊಸತು, ಕೆಲವೊಂದು ನೀಲ ಸ್ವರ್ಗ,**
**ಕೆಲವೊಂದು ಹಸಿರು ಹಸಿರು, ಕೆಲವೊಂದು ಎಂದೂ ನೋಡದ್ದು,**
**ಕೆಲವೊಂದು ದಪ್ಪನವರಿಗೆ, ಕೆಲವೊಂದು ಸಣಕಲರಿಗೆ,**
**ಕೆಲವೊಂದು ಕಲಾತ್ಮಕ, ಕೆಲವೊಂದು ಹಾಸ್ಯಮಯ,**
**ಕೆಲವೊಂದು ಸಂತಸ, ಕೆಲವೊಂದು ಕಲಿಕೆ,**
**ಕೆಲವೊಂದು ರುಚಿಯಾದದ್ದು, ಕೆಲವೊಂದು ಮನಕ್ಕೆ**
**ಅನುಭವ ನೀಡುವುದನ್ನು ಮರೆಯದಿರಿ.**
**ಓ! ನಾಯಕಿಯರೇ! ಹಿಂಡಿನ ನಾಯಕಿಯರೇ!**

## ಪ್ರಕೃತಿ ಸಂಚಾರ

ಈ ಕಾರ್ಯಕ್ರಮ ಬುಲ್‌ಬುಲ್‌ಗಳಿಗೆ ಗಿಡ-ಮರಗಳನ್ನು ನೋಡುವ ಪ್ರಾಣಿಪಕ್ಷಿಗಳನ್ನು ವೀಕ್ಷಿಸುವ, ಪ್ರಕೃತಿಯ ಸೌಂದರ್ಯವನ್ನು ಮೆಚ್ಚುವ, ಪ್ರಕೃತಿ ಸ್ನೇಹಿಯಾಗುವ ಅವಕಾಶ ನೀಡುತ್ತದೆ. ಈ ಅನುಭವ ಜೀವನ ಪರ್ಯಂತ ಹರ್ಷವನ್ನು ತರುತ್ತದೆ. ನೀವು ಮಾಡಬಹುದಾದುದು.

1. ಪ್ರಕೃತಿಯಲ್ಲಿ ಉಪಯುಕ್ತವಾದುದನ್ನು ಗುರುತಿಸುವುದು.
2. ಶಬ್ದ ಮಾಡದೆ ಸುತ್ತಲೂ ನೋಡುತ್ತಾ ಪ್ರಕೃತಿಯಲ್ಲಿ ನಡೆದಾಡುವುದು.
3. ವಿಶೇಷವೆನಿಸಿದ ಜೀವಜಂತುಗಳ ಪಟ್ಟಿ ಮಾಡುವುದು.
4. ಎಲೆಗಳ ವಿನ್ಯಾಸ, ಜರೀ, ಗಿಡಗಳು, ಹಣ್ಣು, ಕಾಯಿ, ಬೀಜಗಳನ್ನು ಗಮನಿಸಿ. ಔಷಧಿ ಸಸ್ಯಗಳನ್ನು ಗುರುತಿಸುವುದು.
5. ಪ್ರಕೃತಿಯಲ್ಲಿ ಶಬ್ದ ಗಮನಿಸಿ, ಪ್ರಾಣಿ-ಪಕ್ಷಿಯ ಕೂಗುಗಳನ್ನು ಅಣುಕು ಮಾಡುವುದು.

6. ಬುಲ್‌ಬುಲ್ ರಜಾ ದಿನಗಳಲ್ಲಿ ರಾತ್ರಿ ಆಕಾಶ ನೋಡಿ ಧೃವ ನಕ್ಷತ್ರ ಗುರುತಿಸುವುದು.

7. ಸಾಮಾನ್ಯ ಪ್ರಾಣಿಗಳ ಹೆಜ್ಜೆ ಗುರುತನ್ನು ವೀಕ್ಷಿಸಿ ಗುರುತಿಸಿ, ಇವುಗಳ ಅಚ್ಚನ್ನು ಪ್ಲಾಸ್ಟರ್ ಆಫ್ ಪ್ಯಾರಿಸ್‌ನಿಂದ ಮಾಡುವುದು.

8. ಎಲೆ, ವಿವಿಧ ರೀತಿಯ ಬೀಜಗಳನ್ನು (ಹಾರುವ, ಸಿಡಿಯುವ) ಸಂಗ್ರಹಿಸುವುದು.

9. ಪ್ರಕೃತಿ ಸಂಚಾರದ ದಿನಚರಿ / ವರದಿ ಬರೆಸುವುದು.

10. ಪ್ರಕೃತಿ ಕುರಿತು ಕಿರು ಕವನ ಅಥವಾ ಕಿರು ಕಥೆ, ಬರೆಸುವುದು.

ಈ ಕಾರ್ಯಕ್ರಮದ ಅನುಭವ, ಸ್ಫೂರ್ತಿಗಳಿಂದ ಮಕ್ಕಳು ಇವುಗಳ ಸಂಗ್ರಹವನ್ನು ತುಣುಕು ಪುಸ್ತಕ (Scrap Book), ವಸ್ತು ಸಂಗ್ರಹಾಲಯ ಮುಂತಾದ ಚಟುವಟಿಕೆ ಮಾಡಬಹುದು. ಪ್ರಕೃತಿ ಅಧ್ಯಯನ ಪ್ರಾರಂಭಿಸಬಹುದು.

**ಕಥೆ ಹೇಳುವ ಲಲಿತ ಕಲೆ**

ಕಥೆ ಹೇಳುವುದು ಒಂದು ಕಲೆ. ಈ ಕಲೆಯಲ್ಲಿ ಬುಲ್‌ಬುಲ್ ನಾಯಕಿ ಪರಿಣಿತಿ ಪಡೆಯಬೇಕು. ಕಥೆಗಳ ಮೂಲಕ ನೀತಿ, ಮೌಲ್ಯ, ಸಂವೇದನಾ ಶೀಲತೆಯನ್ನು ಅಭಿವೃದ್ಧಿಗೊಳಿಸಬಹುದು. ಬುಲ್‌ಬುಲ್ ನಾಯಕಿಗೆ, ಬುಲ್‌ಬುಲ್ ಕಾರ್ಯಕ್ರಮದಲ್ಲಿ ಕಥೆ ಮಹತ್ವದ ಪಾತ್ರವಹಿಸುತ್ತದೆ. ಕಥೆಯನ್ನು ಎಷ್ಟು ಉದ್ದವಾದರೂ ಬೆಳೆಸಬಹುದು. ಇಲ್ಲವಾದರೆ ಸಂಕ್ಷಿಪ್ತ ಗೊಳಿಸಬಹುದು.

ವಿಷಯ ಕಲಿಸುವ ಮುನ್ನ ಅದಕ್ಕೆ ಸಂಬಂಧಿಸಿದ ರೋಚಕ ಕಥೆಗಳನ್ನು, ಸಾಹಸ ಕಥೆಗಳನ್ನು ಘಟನೆಗಳನ್ನು ಹೇಳುವುದರಿಂದ ಕಲಿಕೆಯಲ್ಲಿ ಆಸಕ್ತಿ ಉಂಟಾಗುತ್ತದೆ. ಪ್ರತಿಜ್ಞೆ, ನಿಯಮ, ಪ್ರಥಮ ಚಿಕಿತ್ಸೆ, ದಿಕ್ಸೂಚಿ ಕಲಿಸುವಾಗ ಹೆಚ್ಚು ಸಹಾಯಕ. ಗಂಟು, ಆರೋಗ್ಯ, ರಸ್ತೆ ನಿಯಮ ಕಲಿಸುವಾಗ ಇದರ ಮೂಲಕ ಕೆಲವು ಅಂಶಗಳು ಅವರ ನೆನಪಿನಲ್ಲಿ ಶಾಶ್ವತವಾಗಿ ಉಳಿಯುವುವು. ಕಥೆಯಲ್ಲಿ ಬರುವ ಹಾಸ್ಯ ಪಾತ್ರಗಳೊಡನೆ ನಕ್ಕು, ಖಿನ್ನರೊಡನೆ ದುಃಖಿಸಿ, ದುರ್ಘಟನೆಗೆ ಆತಂಕ ಪಟ್ಟು, ಒಟ್ಟಾಗಿ ಅನುಭವಿಸುವ ಈ ಭಾವನೆಗಳ ಅನುಭವ ಅತ್ಯಂತ ಆನಂದ ನೀಡುತ್ತದೆ.

ಕಥೆ ಹೇಳುವುದು ಅನಾದಿ ಕಾಲದಿಂದ ನಮ್ಮ ಸಂಸ್ಕೃತಿಯಲ್ಲಿ ಹಾಸು ಹೊಕ್ಕಾಗಿರುವ ಕಲಿಕೆಯ ಒಂದು ಪರಿಣಾಮಕಾರಿ ವಿಧಾನ. ಇದು ಬುಲ್‌ಬುಲ್‌ಗಳ

ಮನಸ್ಸನ್ನು ರೂಪಿಸುವ ಒಂದು ಪರಿಣಾಮಕಾರಿ ವಿಧಾನವೆಂದು ಪರಿಗಣಿಸಲಾಗಿದೆ. ಕಥೆ ಬುಲ್‌ಬುಲ್‌ಗಳಿಗೆ ಜೀವಂತ ಅನುಭವ ನೀಡುವುದಲ್ಲದೆ, ಮೆದುಳಿಗೆ ವ್ಯಾಯಾಮ, ಮನಸ್ಸಿಗೆ ಮುದ ನೀಡುತ್ತದೆ. ಸತ್ಯ ಹರಿಶ್ಚಂದ್ರನ ಕಥೆ ಮತ್ತು ಮಹಾತ್ಮಾ ಗಾಂಧಿಯವರಿಗೆ ಆದರ್ಶವಾದದ್ದು ಎಲ್ಲರಿಗೂ ತಿಳಿದ ವಿಷಯವಲ್ಲವೆ?

ಕಥೆಯಲ್ಲಿ ಕಲ್ಪನೆ ಇರಬೇಕು, ಆದರ್ಶವಿರಬೇಕು, ಪ್ರೀತಿ ಸ್ನೇಹ ತ್ಯಾಗವಿರಬೇಕು. ಸಂತೋಷವಿರಬೇಕು. ಕಥೆ ಕೇಳುವವರ ಉತ್ಸಾಹ ಅದರೊಡನೆ ತೇಲುವ ಅವರ ಮನಸ್ಸು ಒಳ್ಳೆಯ ಪಾತ್ರದೊಡನೆ ಗುರುತಿಸಿಕೊಳ್ಳುವ ವೈಖರಿ ಎಲ್ಲವೂ ಕಲಿಕೆಯೆ. ಆದ್ದರಿಂದ ಕಥೆಯನ್ನು ಆಸಕ್ತಿ ಪೂರ್ಣವಾಗಿ ಹೇಳಬೇಕು.

ಕಥೆ ಹೇಳುವವರು ನೆನಪಿಡಬೇಕಾದ ಅಂಶಗಳು :

1. ಸರಿಯಾದ ಆಯ್ಕೆಯ ಕಥೆ
2. ಒಳ್ಳೆಯ ಭಾಷೆ
3. ಚುರುಕಾಗಿ ಲವಲವಿಕೆಯಿಂದ ಪಾತ್ರಗಳನ್ನು ಮೂಡಿಸುತ್ತಾ ಹೇಳಬೇಕು.
4. ಮುಖ್ಯಾಂಶಗಳು ಮತ್ತು ಪರಾಕಾಷ್ಠೆ ಸಂಭವಿಸಿದಾಗ ಸ್ವಲ್ಪ ನಿಧಾನವಾಗಿ ಒತ್ತು ಕೊಟ್ಟು ಹೇಳಬೇಕು.
5. ಕೇಳುಗರಿಕೆ ಇಷ್ಟವಾಗುವಂತಹ ಧ್ವನಿ, ಏರಿಳಿತಗಳಿಂದ ಕೂಡಿದ ಧ್ವನಿಯಲ್ಲಿ ಸ್ಪಷ್ಟವಾಗಿ ಕೇಳಿಸುವಂತೆ ಹೇಳಬೇಕು. ಕಥೆ ಹೇಳುತ್ತಾ ಕೇಳುಗರನ್ನು ಕಥೆಯಲ್ಲಿ ಲೀನಗೊಳಿಸಬೇಕು.
6. ಎಷ್ಟೇ ಚೆನ್ನಾಗಿ ಕಥೆ ತಿಳಿದಿದ್ದರೂ. ಒಮ್ಮೆ ಹೇಳುವ ಕ್ರಮ ಅಭ್ಯಾಸ ಮಾಡಿ. ಕಥೆ ಚೆನ್ನಾಗಿದ್ದರು ಹೇಳುಗರಿಂದ ಅದು ನೀರಸವಾಗುತ್ತದೆ.

## ಕಲರವ ಅಥವಾ ಹಾಡಿ ಹಾಡಿ

ಬುಲ್‌ಬುಲ್‌ಗಳಿಗೆ ಗುಟ್ಟು ಎಂದರೆ ಇಷ್ಟ. ಅವರಿಗೆ ಅನಿರೀಕ್ಷಿತ ವಿಶಿಷ್ಟ ಕಾರ್ಯಕ್ರಮಗಳೆಂದರೆ ಇಷ್ಟ. ಈ ಮನೋಭಾವಕ್ಕಾಗಿ ಕಲರವ ಕಾರ್ಯಕ್ರಮ ರೂಪಿಸಲಾಯಿತು. ಇದರ ಉದ್ದೇಶ ಬುಲ್‌ಬುಲ್‌ಗಳಿಗೆ ಸಂತಸ ನೀಡುವುದು, ಪ್ರತಿಭೆಯನ್ನು ಪೋಷಿಸುವುದು, ನಾಚಿಕೆ, ಹಿಂಜರಿಕೆ ದೂರ ಮಾಡುವುದು, ಗುಂಪು ಸ್ಫೂರ್ತಿ ಬೆಳೆಸುವುದು ಇತ್ಯಾದಿ. ಇದರಿಂದ ಸಕಾರಾತ್ಮಕ ಹಾಗೂ ರಚನಾತ್ಮಕ ಮನೋಭಾವಗಳು ಬುಲ್‌ಬುಲ್‌ಗಳಲ್ಲಿ ಬೆಳೆಯುತ್ತದೆ.

ಕಲರವ ಕಾರ್ಯಕ್ರಮಗಳಲ್ಲಿ ವೈವಿಧ್ಯತೆ ಮತ್ತು ಆನಂದಾತೀತ, ಆಸಕ್ತಿ ಪೂರ್ಣ ಕಾರ್ಯಕ್ರಮ ಮಾಡಿಸಬಹುದು. ಎಲ್ಲವೂ ಷಟ್ಕದಲ್ಲೇ ಮಾಡಬೇಕು. ಒಂಟಿ ಕಾರ್ಯಕ್ರಮ, ಚಿತ್ರಗೀತೆ, ಅಳುವುದು, ನಿಂದನೆ, ಕಳ್ಳತನ ಮುಂತಾದ ಅಹಿತಕರ ಕಾರ್ಯಕ್ರಮಗಳಿಗೆ ಅವಕಾಶವಿಲ್ಲ. ಕಾರ್ಯಕ್ರಮವನ್ನು ಬುಲ್‌ಬುಲ್‌ಗಳೆ ನಾಯಕಿಯರ ಸಹಾಯದಿಂದ ನಿರೂಪಿಸಬಹುದು.

**ಕರಕೌಶಲ**

ಕರಕೌಶಲವು ಕೈಗಳಿಂದ ತಯಾರಿಸುವ ವಸ್ತು. ಬುಲ್‌ಬುಲ್‌ಗಳಿಗೆ ಕೈ ಕೆಲಸವೆಂದರೆ ಬಹಳ ಇಷ್ಟ. ಬುಲ್‌ಬುಲ್‌ಗಳಿಗೆ ಕೈಕೆಲಸ ಮಾಡುವಂತೆ ಪ್ರೋತ್ಸಾಹಿಸಬೇಕು. ಕೈ ಕೆಲಸ ಮಾಡದಿದ್ದರೆ ಮೆದುಳು ವಿಶ್ರಾಂತಿ ತೆಗೆದುಕೊಳ್ಳುತ್ತದೆ.

– ಕೈ ಕೆಲಸದಿಂದ ಮೌಲ್ಯಗಳು ಬೆಳೆಯುತ್ತವೆ.
– ಉಪಯುಕ್ತ ಹವ್ಯಾಸ.
– ಸೃಜನಶೀಲತೆ ಬೆಳೆಸುತ್ತದೆ.
– ಸಂತೋಷ, ಆತ್ಮ ತೃಪ್ತಿ ನೀಡುತ್ತದೆ.
– ಸಮಯದ ಸದುಪಯೋಗವಾಗುತ್ತದೆ.
– ಅವಶ್ಯವಿದ್ದರೆ ಆದಾಯದಾಯಕವಾಗುತ್ತದೆ.
– ಕಸವನ್ನು ರಸ ಮಾಡಬಹುದು.

ನಮ್ಮ ಸಂಸ್ಕೃತಿಯಲ್ಲಿ ಕೈ ಕೆಲಸಕ್ಕೆ ಪ್ರಾಧ್ಯಾನ್ಯತೆ ಇದೆ. ಭಾರತ ಹಾಗು ಕರ್ನಾಟಕ ಕರಕುಶಲ ವಸ್ತುಗಳು ವಿಶ್ವ ಪ್ರಸಿದ್ಧ. ಬುಲ್‌ಬುಲ್ ಕಾರ್ಯಕ್ರಮದಲ್ಲೂ ಕರಕುಶಲತೆಗೆ ಸಾಕಷ್ಟು ಅವಕಾಶ ನೀಡಲಾಗಿದೆ.

**ಬೌದ್ಧಿಕ :** ವಸ್ತುಗಳ ಜೋಡಣೆ ಬಣ್ಣ ಹೊಂದಾಣಿಕೆ. ಆಕೃತಿ ರಚನೆಯಲ್ಲಿ ಆಲೋಚನೆಗಳು ಸಾಕಾರಗೊಳ್ಳುತ್ತವೆ. ತನ್ನ ಕಲ್ಪನೆಯುನ್ನು ಬಳಸುವ ಅವಕಾಶವಿರುತ್ತದೆ. ಆಯ್ಕೆಗೆ ವಿಫುಲ ಅವಕಾಶವಿದೆ.

**ದೈಹಿಕ :** ಕಣ್ಣು ಕೈ ಮತ್ತು ಮನಸ್ಸನ್ನು ಸಮನ್ವಯಗೊಳಿಸುತ್ತದೆ. ಅವುಗಳಿಗೆ ಸ್ವಯಂ ನಿಯಂತ್ರಣ ಅಭ್ಯಾಸವಾಗುತ್ತದೆ.

**ನೈತಿಕ :** ವೀಕ್ಷಣೆ, ಏಕಾಗ್ರತೆ, ಸ್ವಯಂ ನಿಯಂತ್ರಣ ವಸ್ತು ಕಾಪಾಡುವಿಕೆ ಮನೋಬಲ ಹೆಚ್ಚುತ್ತದೆ. ಒಟ್ಟಾಗಿ ಕೆಲಸ ಮಾಡುವಾಗ ಆತ್ಮವಿಶ್ವಾಸ ಬೆಳೆಯುತ್ತದೆ.

ನಮ್ಮ ಸಂಸ್ಥಾಪಕರಾದ ಬಿ.ಪಿ.ಯವರ ಪತ್ನಿ ಅಲೇವ್ ಬಿ.ಪಿ.ಯವರ ತಾಯಿಗೆ ಕಸೂತಿ ಹವ್ಯಾಸವಿತ್ತು. ಅವರು ಈ ಹವ್ಯಾಸವನ್ನು "ಆಂತರಿಕ ಶಾಂತಿ" ಎಂದು ಕರೆದಿದ್ದಾರೆ.

ಬುಲ್‌ಬುಲ್‌ಗಳಿಗೆ ಕಸೂತಿ ಪ್ರಯೋಗಕ್ಕೆ ಒಳ್ಳೆಯ ಅವಕಾಶವಿದೆ. ಇದು ಗೃಹಕೃತ್ಯದ ಅಲಂಕರಣದ ಒಂದು ಭಾಗ. ಇದು ಉಡುಗೊರೆ ಕೊಡುವವರಿಗೆ ಹೆಮ್ಮೆ ತೆಗೆದುಕೊಳ್ಳುವವರಿಗೆ ಸಂತಸ ನೀಡುತ್ತದೆ.

**ನೀವು ಮಾಡಬಹುದಾದುದು** –ಕಾಗದ, ಬಣ್ಣಗಳು, ಕತ್ತರಿ, ಕಡ್ಡಿ, ಗೋಂದುಗಳಿಂದ ಕವರ್, ಶುಭ ಪತ್ರ, ಹಾರ, ಚಾಪೆ, ಉಡುಪಿನ ಮಾದರಿ, ಟೋಪಿ, ದೋಣಿಗಳು, ಪ್ರಾಣಿ ಪಕ್ಷಿಗಳು.....

- ಕೆಂಪು ಮಣ್ಣು, ಜೇಡಿ ಮಣ್ಣು, ಸುದ್ದೇ ಮಣ್ಣು, ಬಣ್ಣ, ನೀರು ಬಳಸಿ ಪುಟ್ಟ ಪುಟ್ಟ ಪಾತ್ರೆ, ಒಲೆ, ಕುಂಡಗಳು, ಪ್ರಾಣಿಗಳು, ಮಣಿಗಳು, ಗೊಂಬೆಗಳು.....
- ಪ್ಲಾಸ್ಟಿಕ್ ಚೀಲದಿಂದ ದಾರ ಮಾಡಿ ಕ್ರೋಷೊ, ಹೂ ಹಾರ ಮುಚ್ಚಿಕೆ, ಹಾಸು.....
- ಬಟ್ಟೆ ಕಸೂತಿ, ಗೊಂಬೆ, ಮುಚ್ಚಿಕೆ, ಹಾಸು, ಚೀಲಗಳು.....



## 10. ಪೋಷಕರು ಮತ್ತು ಸಾರ್ವಜನಿಕರ ಸಹಕಾರ

ಬುಲ್‌ಬುಲ್ ಹಿಂಡಿನ ಪ್ರಗತಿಗೆ ಪೋಷಕರು ಮತ್ತು ಸಾರ್ವಜನಿಕರ ಸಹಕಾರ ಅಗತ್ಯ. ಬುಲ್‌ಬುಲ್‌ಗಳ ವೈವಿಧ್ಯತೆಯಿಂದ ಕೂಡಿದ ಚಟುವಟಿಕೆಗಳು ಸಾರ್ವಜನಿಕರಿಗೆ ಪ್ರದರ್ಶಿಸುವುದು.

ಬುಲ್‌ಬುಲ್‌ಗಳು ಒಳ್ಳೆ ಕೆಲಸ, ಚುರುಕುತನ, ಲವಲವಿಕೆ ಹಸನ್ಮುಖಿ, ವಿನಯಶೀಲತೆ, ಸನ್ನಡತೆ, ತನ್ನ ಕೆಲಸ ತಾನೇ ಮಾಡಿಕೊಳ್ಳುವುದು, ತಂದೆ-ತಾಯಿಯರಿಗೆ ಸಹಾಯ, ಇತರರಿಗೆ ಸಹಾಯ ಮಾಡುವ ಮೂಲಕ ಸಮುದಾಯಕ್ಕೆ ಸಹಾಯ ಮಾಡುವುದರಿಂದ ಸಾರ್ವಜನಿಕರನ್ನು ಕ್ರಮೇಣ ಆಕರ್ಷಿಸುತ್ತಾರೆ.

### ಹಿಂಡು ಮತ್ತು ಪೋಷಕರು

ಪೋಷಕರು ನಮ್ಮ ಚಳವಳಿಯ ಸಂಪನ್ಮೂಲಗಳು. ಅವರ ಅನುಮತಿ ಯಿಂದ ಹಿಂಡಿಗೆ ಬಾಲಕಿಯರು ಸೇರುತ್ತಾರೆ. ಶಾಲೆ, ಕುಟುಂಬ, ಸಮುದಾಯ, ದೇಶ ಹಾಗು ವಿಶ್ವಕ್ಕೆ ಬುಲ್‌ಬುಲ್ ಮಕ್ಕಳು ಉಪಯುಕ್ತರಾಗುತ್ತಾರೆಂದು ಪೋಷಕರು ಮನಗಂಡು, ಬುಲ್‌ಬುಲ್ ಕಾರ್ಯಕ್ರಮಗಳಲ್ಲಿ ಸಹಾಯ ಮಾಡಲು ಮುಂದುವರಿಯುತ್ತಾರೆ. ಹಿಂಡಿನ ಸಮಾರಂಭಗಳಿಗೆ ಭೋಜನ, ಉಪಹಾರ ನೀಡುವುದು, ಶೃಂಗರಿಸುವುದು, ಹಿಂಡಿನ ಸಭೆಯಲ್ಲಿ ಅನೇಕ ವಿಷಯ ನೃತ್ಯ ಮತ್ತು ಹಾಡು ಕಲಿಸುವುದು. ಪರೀಕ್ಷಿಸಲು ಸಹಾಯ ಮಾಡುವುದು ಬುಲ್‌ಬುಲ್ ಉತ್ಸವ, ಪ್ರಕೃತಿ ಸಂಚಾರ, ಹಿಂಡಿನ ರಜಾದಿನ, ಸಮಾವೇಶಗಳಲ್ಲಿ ಸಹಾಯ ಮಾಡುವುದು ಇತ್ಯಾದಿ. ಹಣಕಾಸು ಸಂಗ್ರಹಿಸಲು ಸಹಾಯ ಮಾಡುತ್ತಾರೆ. ಪೋಷಕರೊಡನೆ ಮಧುರ ಬಾಂಧವ್ಯ ಇಟ್ಟುಕೊಂಡು ಬುಲ್‌ಬುಲ್ ಚಟುವಟಿಕೆಯ ಅವಶ್ಯಕತೆಗೆ ತಕ್ಕಂತೆ ಅವರ ಸಹಾಯ ಪಡೆಯಬಹುದು.

ಬುಲ್‌ಬುಲ್‌ಗಳ ಕುಟುಂಬದೊಡನೆ ನಾಯಕಿ ಸಂಪರ್ಕ ಹೊಂದಿರಬೇಕು. ಇದರಿಂದ ನಾಯಕಿ, ಅವರ ವಿಶ್ವಾಸಕ್ಕೆ ಮತ್ತು ಮೆಚ್ಚುಗೆಗೆ ಪಾತ್ರಳಾಗುವಳು.

### ಆಟಗಳು

ನಮ್ಮ ಸ್ಕೌಟ್ ಚಳವಳಿಯ ಸಂಸ್ಥಾಪಕರು ಹಾಗು ಗೈಡ್ ಚಳವಳಿಯ ಅನುಮೋದಕರು ಆದ ಬಿ.ಪಿ. ನಿಮಗೆ ಬುಲ್‌ಬುಲ್ ಆಟವನ್ನು ನೀಡಿದ್ದಾರೆ. ಇದರಲ್ಲಿ ಹಿರಿಯರು ನಾಯಕರು ಮಕ್ಕಳಿಗೆ ರೋಚಕ ಮತ್ತು ಸವಾಲುಗಳಿಂದ

ಕೂಡಿದ ಆಟಗಳನ್ನು ನೀಡಬೇಕು. ಆಟ ಒಂದು ತರಬೇತಿ ಸಾಧನವಾಗಿ ಬಳಸುತ್ತೇವೆ. ಬುಲ್‌ಬುಲ್‌ಗಳಿಗೆ ದೈಹಿಕವಾಗಿ ಮಾನಸಿಕವಾಗಿ, ಅಭಿವೃದ್ಧಿಗೊಳಿಸಲು, ಚಾರಿತ್ರ್ಯಾಭಿವೃದ್ಧಿಗೊಳಿಸಲು, ಶಿಸ್ತನ್ನು ಬೆಳೆಸಲು, ಸೋಲು-ಗೆಲುವನ್ನು ಸಮನಾಗಿ ಸ್ವೀಕರಿಸಲು, ನಿಸ್ವಾರ್ಥತೆಯನ್ನು ಬೆಳೆಸಲು ಆಟ ಸಹಾಯಕವಾಗುತ್ತದೆ.

**ಉದ್ದೇಶ**

- ಸಂತಸ, ವಿನೋದ
- ಹೊಸ ಕೌಶಲಗಳ ಅಭ್ಯಾಸ
- ಕಾರ್ಯಕ್ರಮದಲ್ಲಿ ವೈವಿಧ್ಯತೆ
- ಬದಲಾವಣೆ
- ಅಹ್ಲಾದತೆ.
- ನಾಯಕತ್ವ ಅವಕಾಶ
- ಸೂಚನೆಗಳನ್ನು ಕೇಳುವುದು ಅನುಸರಿಸುವುದು ಮತ್ತು ಇತರರಿಗೆ ಹೇಳುವುದು.
- ಆರೋಗ್ಯಕರ ಮನಸ್ಸು, ಆರೋಗ್ಯಕರ ದೇಹ.

**ಆಟವಾಡಿಸಲು ಸಲಹೆಗಳು**

- ಯಾವ ಆಟ? ಯಾವಾಗ? ಯಾವ ಉದ್ದೇಶಕ್ಕೆ? ಯಾವ ವಯಸ್ಸಿಗೆ ನಿರ್ಧರಿಸಿ.
- ಬೇಕಾದ ಸಲಕರಣೆ ಸಿದ್ಧವಾಗಿಟ್ಟುಕೊಳ್ಳಿ.
- ಆಟಕ್ಕೆ ಸ್ಥಳಗೊತ್ತು ಪಡಿಸಿ. ಆಟಗಾರರನ್ನು ಕರೆಯಿರಿ.
- ಆಟಕ್ಕೆ ಸ್ಪಷ್ಟವಾದ, ನೇರ ಸೂಚನೆ ನೀಡಿ.
- ಒಂದೆರಡು ಸುತ್ತು ಮಾದರಿ ಆಟ ಆಡಿಸಿ.
- ಆಟ ಸ್ಪರ್ಧೆಯಾಗಿದ್ದರೆ ಸರಿಯಾಗಿ ಗಮನಿಸಿ.
- ಮೋಸದ ಆಟಕ್ಕೆ ಅವಕಾಶಕೊಡಬೇಡಿ.
- ಆಟಕ್ಕೆ ಅಂಕವಿದ್ದರೆ ಸರಿಯಾಗಿ ಗೊಂದಲವಾಗದಂತೆ ಅಂಕ ನೀಡಿ.

- ಒಂದು ವೇಳೆ ಆಟದಲ್ಲಿ ಬದಲಾವಣೆ ಅವಶ್ಯಕತೆ ಇದ್ದರೆ ಬದಲಾಯಿಸಿ.
- ಆಟ ನಗುವಿನಿಂದ ಸ್ಫೂರ್ತಿಯಿಂದ ಕೂಡಿರಲಿ.
- ಕೊನೆಯಲ್ಲಿ ಗೆದ್ದವರನ್ನು ಚಪ್ಪಾಳೆಯಿಂದ ಮಕ್ಕಳು ಸಂತಸವಾಗಿ ಸನ್ಮಾನಿಸುವಂತೆ ಮಾಡಿ. ಸೋತವರಿಗೆ ಉತ್ತೇಜನ ನೀಡಿ. ಇದನ್ನೇ ಆಟದ ಸ್ಫೂರ್ತಿ (Sportive Spirit) ಎನ್ನುತ್ತೇವೆ. ಈ ಸ್ಫೂರ್ತಿ ಜೀವನ ಪರ್ಯಂತ ಅವಶ್ಯಕ.

## ಗೈಡ್ಸ್‌ಗಳ ಸ್ವಧರ್ಮ ಪ್ರಾರ್ಥನೆ (Guides Own)

1. ನಾವೆಲ್ಲಾ ಒಂದೇ ಎಂಬ ಭಾವನೆಗಾಗಿ ಹಿಂಡಿನಲ್ಲಿ ಧರ್ಮಾನುಸಾರ ಕುಳಿತು ಒಟ್ಟಾಗಿ ಪ್ರಾರ್ಥಿಸಿಲಾಗುವುದು. ಪ್ರಾಮಾಣಿಕತೆ ಸಂಕ್ಷಿಪ್ತತೆ ಮತ್ತು ಸರಳತೆ ಇದರ ಮುಖ್ಯಾಂಶವಾಗಿರಬೇಕು. ಮೊದಲಿಗೆ ಒಂದು ಉನ್ನತ ವಾಕ್ಯದೊಡನೆ ಪ್ರಾರಂಭಿಸಬೇಕು. ಪ್ರತಿ ಧರ್ಮದವರು ತಮ್ಮ ತಮ್ಮ ರೀತಿಯಲ್ಲಿ ಒಂದೆರಡು ನಿಮಿಷ ಧರ್ಮಗ್ರಂಥ ಪಠಿಸಿ. ಭಕ್ತಿಗೀತೆ ಹಾಡುವರು. ನಂತರ ಎಲ್ಲಾ ಧರ್ಮಕ್ಕೂ ಅನ್ವಯವಾಗುವ ಭಕ್ತಿ ಗೀತೆ ಉದಾಹರಣೆಗೆ ಅಂತರಮಮ, ಹರದೇಶ ಮೆತೂ, ಜಯ ಬೋಲೋ ಹೀಗೆ ಯಾವುದನ್ನಾದರು ಹಾಡಿ ನಂತರ ಒಂದು ನಿಮಿಷ ಮೌನ ಪ್ರಾರ್ಥನೆ ಮಾಡಿ ಪ್ರಶಾಂತತೆಗೆ ಭಂಗ ತರದಂತೆ ಸಭಾಂಗಣದಿಂದ ನಿರ್ಗಮಿಸಬೇಕು. ಇದನ್ನು ಸಾಲು ಅಥವಾ ವೃತ್ತದಲ್ಲಿ ಕುಳಿತು ಮಾಡಬಹುದು. ಬೆಳಿಗ್ಗೆ ಅಥವಾ ಸಂಜೆ ಈ ಕಾರ್ಯಕ್ರಮವನ್ನು ಮಾಡಬಹುದು.

2. **ಸರ್ವಧರ್ಮ ಪ್ರಾರ್ಥನೆ:** ಮೂಲತಃ ಚಳವಳಿಯ ಸಂಸ್ಥಾಪಕರು ದೇವರಲ್ಲಿ ಅಚಲ ನಂಬಿಕೆಯುಳ್ಳವರು. ಇದರ ಮೂಲ ತತ್ವಗಳ ಪ್ರಕಾರ (Fundamentals) ದೇವರಲ್ಲಿ ನಂಬಿಕೆಯುಳ್ಳವರು ಮಾತ್ರ ಈ ಸಂಸ್ಥೆಯ ಸದಸ್ಯರಾಗಲು ಸಾಧ್ಯ. ಪ್ರತಿಯೊಬ್ಬ ಸದಸ್ಯರು ದೇವರಿಗೆ ನನ್ನ ಕೈಲಾದ ಕರ್ತವ್ಯವನ್ನು ಮಾಡುತ್ತೇನೆ ಎಂದು ಪ್ರತಿಜ್ಞೆ ಮಾಡುತ್ತೇವೆ. ಆದ್ದರಿಂದ ಪ್ರಾರ್ಥನೆಗೆ ನಮ್ಮ ಕಾರ್ಯಕ್ರಮದಲ್ಲಿ ಅಗ್ರಸ್ಥಾನವನ್ನು ನೀಡಲಾಗಿದೆ. ಎಲ್ಲಾ ಕಾರ್ಯವನ್ನು ದೇವರಿಗೆ ಅರ್ಪಿಸುತ್ತೇವೆ. ವಿಶ್ವದಾದ್ಯಂತ ಈ ಚಳವಳಿಯಲ್ಲಿ ದಿನದ ಪ್ರಾರಂಭದಲ್ಲಿ ಸಮಾರಂಭಗಳ ಪ್ರಾರಂಭದಲ್ಲಿ, ಭೋಜನದ ಪ್ರಾರಂಭದಲ್ಲಿ ಮತ್ತು ದಿನದ ಅಂತ್ಯದಲ್ಲಿ ಪ್ರಾರ್ಥನೆಯನ್ನು ಮಾಡಲಾಗುತ್ತದೆ.

ಗಾಂಧೀಜಿಯುವರು ಸರ್ವಧರ್ಮ ಸಮನ್ವಯಕ್ಕಾಗಿ, ಧಾರ್ಮಿಕ ಸೌಹಾರ್ದತೆಗಾಗಿ ಹಾಗೂ ಭಾವೈಕ್ಯತೆಗಾಗಿ ಸರ್ವಧರ್ಮ ಪ್ರಾರ್ಥನ ಸಭೆಯನ್ನು ಆರಂಭಿಸಿದರು. ಎಲ್ಲಾ ಧರ್ಮಿಯರು ಬೇಧವನ್ನು, ದ್ವೇಷವನ್ನು ಮರೆತು ಒಂದಾಗಿ ಪ್ರಗತಿಯನ್ನು ಸಾಧಿಸಬೇಕೆಂದು ಕರೆನೀಡಿದರು. ಭಾರತ ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಯನ್ನು ನಮ್ಮ ರಾಷ್ಟ್ರಕ್ಕೆ ಅಳವಡಿಸಿಕೊಂಡಾಗ ಈ ಪ್ರಾರ್ಥನಾ ಕ್ರಮವನ್ನು ಶ್ರೀಮತಿ ಲಕ್ಷ್ಮೀ ಮುಜುಂದಾರ ಅಂದಿನ ರಾಷ್ಟ್ರದ ಪ್ರಧಾನ ಆಯುಕ್ತೆ ಗೈಡಿಂಗ್‌ಗೆ ಅಳವಡಿಸಿದರು. ಎಲ್ಲಾ ಧರ್ಮದವರೂ ದೇವರ ಮಕ್ಕಳು. ದೇವನೊಬ್ಬ ನಾಮ ಹಲವು ಎಂಬ ಅರಿವು ಮೂಡಿಸಬೇಕು.

ಈ ಚಟುವಟಿಕೆಯನ್ನು ವಿಧಿಬದ್ಧವಾಗಿ ನಡೆಸಲಾಗುವುದು. ಈ ಸಭೆಯನ್ನು ಒಳಾಂಗಣ ಅಥವಾ ಹೊರಾಂಗಣದಲ್ಲಿ ಏರ್ಪಡಿಸಲಾಗುವುದು. ಬೆಳಗಿನ ಅಥವಾ ಸಂಜೆಯ ಸಮಯದಲ್ಲಿ ನಡೆಸಲಾಗುವುದು. ಸಭೆಯಲ್ಲಿ ಭಾಗವಹಿಸುವ ಎಲ್ಲಾ ಧರ್ಮದ ಪ್ರತಿನಿಧಿಗಳು ಮತ್ತು ಪ್ರಾರ್ಥನಾ ತಂಡವು ಗೊತ್ತುಪಡಿಸಿದ ಸಮಯಕ್ಕೆ ಸರಿಯಾಗಿ, ಸರಳವಾಗಿ, ಸುಂದರವಾಗಿ ಸಜ್ಜುಗೊಳಿಸಿದ ವೇದಿಕೆಯ ಮೇಲೆ ಆಸೀನರಾಗುವರು. ಶಿಬಿರಾರ್ಥಿಗಳು ಸಾಲಾಗಿ, ಮೌನವಾಗಿ ವೇದಿಕೆಯ ಎದುರಿಗೆ ಆಸೀನರಾಗುವರು. ನಾಯಕ/ನಾಯಕಿ ಜ್ಯೋತಿಬೆಳಗಿ ಪ್ರಾರ್ಥನೆಯನ್ನು ಪ್ರಾರಂಭಿಸುವರು. ಮೊದಲಿಗೆ ಶ್ಲೋಕಗಳು, ಸರ್ವಧರ್ಮ ಪಠಣ, ಸರ್ವಧರ್ಮ ಗೀತೆಗಳು, ರಾಮ್‌ಧುನ್, ಶಾಂತಿಪಾಠ ಹಾಡಿ ನಂತರ ಒಂದು ನಿಮಿಷ ಮೌನ ಪ್ರಾರ್ಥನೆ ಮಾಡಿ ಸಭಾಂಗಣದ ಪ್ರಶಾಂತತೆಗೆ ಭಂಗ ತರದಂತೆ ಸಾಲಾಗಿ ಸದಸ್ಯರು ನಿರ್ಗಮಿಸಿದ ನಂತರ ವೇದಿಕೆಯ ಮೇಲಿನ ಪ್ರಾರ್ಥನಾ ತಂಡವು ನಿರ್ಗಮಿಸುವುದು.

## ಹಿಂಡಿನ ಅನ್ವೇಷಣೆ (Flock Expedition)

ಅನ್ವೇಷಣೆ ಬುಲ್‌ಬುಲ್‌ಗಳಿಗೆ ತನ್ನ ಸುತ್ತಲನ್ನು ತಿಳಿಯಲು, ಪ್ರಕೃತಿಯನ್ನು ತಿಳಿಯಲು ಸಹಾಯ ಮಾಡುತ್ತದೆ. ಅನ್ವೇಷಣೆ ಮಕ್ಕಳಿಗೆ ಇಷ್ಟವಾದ ಉತ್ಸುಕವಾದ ಕಾರ್ಯಕ್ರಮ. ಇದನ್ನು ವಿವಿಧ ರೀತಿಯಲ್ಲಿ ಯೋಜಿಸಬಹುದು. ನೇರವಾಗಿ ಸ್ಥಳಕ್ಕೆ ಕರೆದುಕೊಂಡು ಹೋಗಿ ಅನ್ವೇಷಿಸಲು ಹೇಳಬಹುದು. ಸ್ವತಂತ್ರವಾಗಿ ವೀಕ್ಷಿಸುವ ಸಂಗ್ರಹಿಸುವ ಹೊಸ ಅನುಭವಗಳನ್ನು ಪಡೆಯುವ ಅವಕಾಶ ನೀಡುತ್ತದೆ. ಇಲ್ಲವೆ ದಾರಿ ಗುರುತು/ಜಾಡು ಹಾಕಿ ಕಥೆ ಹೆಣೆದು ಅನ್ವೇಷಣೆ ಮಾಡಿಸಬಹುದು. ಇದರಲ್ಲಿ ಸವಾಲು, ರೋಚಕ ಕಾರ್ಯಗಳಿದ್ದರೆ ಹೆಚ್ಚು ಪರಿಣಾಮಕಾರಿ. ಇದರಲ್ಲಿ ಆಟ, ದಿಕ್ಕು, ಕರಕೌಶಲ, ಪ್ರಥಮ ಚಿಕಿತ್ಸೆಗಳನ್ನು ಅಳವಡಿಸಬಹುದು. ಈ ಕಾರ್ಯಕ್ರಮದಲ್ಲಿ ಸಾರ್ವಜನಿಕ ಆಸ್ತಿ ಮತ್ತು ಪ್ರಕೃತಿಯನ್ನು ಬುಲ್‌ಬುಲ್‌ಗಳು ಹಾಳು ಮಾಡದಂತೆ ಕಾಳಜಿವಹಿಸಬೇಕು.

ಅನ್ವೇಷಣೆ ಕಾರ್ಯಕ್ರಮ ಯೋಜಿಸುವಾಗ ಗಮನಿಸಬೇಕಾದ ಮುಖ್ಯಾಂಶಗಳು.

- ಹಿಂಡಿನ ಸಭೆಯಲ್ಲಿ ಎಲ್ಲಿಗೆ? ಯಾವಾಗ? ಹೇಗೆ? ಹೋಗಬೇಕೆಂದು ಚರ್ಚಿಸಿ, ಪೋಷಕರ / ಶಾಲೆಯ ಅನುಮತಿ ಪಡೆಯಿರಿ. ಗೈಡ್ ಆಯುಕ್ತರಿಗೆ ಕಾರ್ಯಕ್ರಮ ಮಾಹಿತಿ ನೀಡಿ.
- ಸಲಕರಣೆಗಳನ್ನು ಸಿದ್ಧ ಮಾಡಿಕೊಳ್ಳಿ.
- ನಿಖರವಾಗಿ ಹೊರಡುವ ಬರುವ ವೇಳೆ ತಿಳಿಸಿ.
- ಎಲ್ಲರೂ ಪೂರ್ಣ ಸಮವಸ್ತ್ರ ಹೊಂದಿರಬೇಕು. ಪಾದರಕ್ಷೆ ಸರಿಯಾಗಿರಬೇಕು.
- ಪ್ರಥಮ ಚಿಕಿತ್ಸೆ ಪೆಟ್ಟಿಗೆ ಜೊತೆಯಲ್ಲಿರಬೇಕು.
- ನಡೆಯುವಾಗ ವಾಹನಗಳಿಗೆ ಇದಿರಾಗದೆ ಕಾಲು ರಸ್ತೆಯಲ್ಲಿ (footpath) ನಡೆಯಿರಿ.
- ಕುಡಿಯುವ ನೀರಿನ ಶೀಶೆ ಪ್ರತಿ ಬುಲ್‌ಬುಲ್ ಬಳಿ ಇರಲಿ.
- ಕಸ ಎಸೆಯುವ ವ್ಯವಸ್ಥೆ ಮಾಡಿ. ಎಲ್ಲೆಂದರಲ್ಲಿ ಕಸ ಹಾಕಬಾರದು.
- ಸಾರ್ವಜನಿಕರ ಎದುರು ಗೌರವಪೂರ್ಣವಾಗಿ, ವಿನಯವಾಗಿ ವರ್ತಿಸಿ.
- ಸಹಾಯಕರು ಅಗತ್ಯ. ತಾಯಿ / ಅಕ್ಕ / ಹಿತೈಷಿಗಳು ಅವರಿಗೂ ವಿಷಯ ತಿಳಿಸಿ ಆಹ್ವಾನಿಸಿ ಜವಾಬ್ದಾರಿ ವಹಿಸಿ.
- ಈ ಕಾರ್ಯಕ್ರಮ ಹಿಂಡಿನ ರಜಾ ದಿನದ ಭಾಗವಾಗಿರಬಹುದು.

## ಬುಲ್‌ಬುಲ್‌ಗಳಿಗೆ ಶಿಬಿರ

1) 8 ವರ್ಷ ತುಂಬಿದ, ಕೋಮಲ ಪಂಖ ಪದಕ ಪಡೆದ ಬುಲ್‌ಬುಲ್‌ಳು ಶಿಬಿರದಲ್ಲಿ ಭಾಗವಹಿಸುವ ಅರ್ಹತೆ ಪಡೆಯುವಳು. ಆರೋಗ್ಯವಂತ ಬುಲ್‌ಬುಲ್ ಮಾತ್ರ ಶಿಬಿರವಾಸ ಮಾಡಬೇಕು.
2) 2 ರಾತ್ರಿಗಿಂತ ಹೆಚ್ಚು ಶಿಬಿರವನ್ನು ಏರ್ಪಡಿಸಬಾರದು.
3) ಶಿಬಿರವನ್ನು ಕಟ್ಟಡಗಳಲ್ಲಿ ಏರ್ಪಡಿಸಬೇಕು. ಕಾರ್ಯಕ್ರಮಕ್ಕೆ ಸಾಕಷ್ಟು ಬಯಲು, ಹಸಿರು ಇರಬೇಕು. ಸುರಕ್ಷತೆ ಇರಬೇಕು.

4) ಪೋಷಕರ / ಶಾಲೆಯ ಅನುಮತಿ ಅಗತ್ಯ. ಗೈಡ್ ಆಯುಕ್ತರಿಗೆ ಮಾಹಿತಿ ಅವಶ್ಯಕವಾಗಿ ನೀಡಬೇಕು.

5) ಬುಲ್‌ಬುಲ್ ಗೈಡ್‌ಗಳ ಜೊತೆ ಶಿಬಿರವಾಸ ಮಾಡುವಂತಿಲ್ಲ.

6) ರಾಜ್ಯದ ಹೊರಗೆ ಶಿಬಿರ ನಡೆಸುವಂತಿಲ್ಲ, ನಡೆಸುವುದಾದರೆ ರಾಜ್ಯ ಆಯುಕ್ತರ (ಗೈ) ಅನುಮತಿ ಪಡೆಯಬೇಕು.

7) ಕನಿಷ್ಠ ಒಂದು ಹಿಂಡಿನ ಶಿಬಿರಕ್ಕೆ ಇಬ್ಬರು ನಾಯಕಿಯರಿರಬೇಕು.

**ಹಾಡುಗಳು**

ಬುಲ್‌ಬುಲ್ ತರಬೇತಿಯಲ್ಲಿ ಹಾಡು ಮಹತ್ವದ ಪಾತ್ರ ವಹಿಸುತ್ತದೆ. ಆನಂದ, ಅರಿವು ಮೂಡಿಸುತ್ತದೆ. ಭಾಗಿತ್ವವನ್ನು ಚುರುಕುಗೊಳಿಸುತ್ತದೆ. ಸ್ಫೂರ್ತಿ ತುಂಬುತ್ತದೆ. ಕಲಿಯಲಿಕ್ಕೆ ಪ್ರೇರಣೆ ನೀಡುತ್ತದೆ. ಹಾಡಿನ ಜೊತೆ ಅಭಿನಯ, ನೃತ್ಯ ಮಕ್ಕಳನ್ನು ಮುದಗೊಳಿಸುತ್ತದೆ. ಹಾಡಿನಲ್ಲಿ ಎಲ್ಲರೂ ತನ್ಮಯರಾಗುತ್ತಾರೆ. ಹಾಡುಗಳ ಆಯ್ಕೆ ಅವಶ್ಯಕತೆಗೆ ತಕ್ಕಂತೆ ಇರಬೇಕು. ಗುಂಪಿನಲ್ಲಿ ಹಾಡುವಾಗ ರಾಗ ಸರಳವಾಗಿರಬೇಕು ಸ್ಫೂರ್ತಿ ತುಂಬಿರಬೇಕು.

ಬುಲ್‌ಬುಲ್‌ಗಳಿಗೆ ತಾಳಲಯ ಪ್ರಾಸಗಳಿಂದ ಮತ್ತು ಅಭಿನಯದಿಂದ ಕೂಡಿದ ಹಾಡುಗಳು ಬಲು ಇಷ್ಟ. ಹಾಡು ಚಿಕ್ಕದಾಗಿರಬೇಕು. ರಾಗ ಆಕರ್ಷಕವಾಗಿರಬೇಕು.

ಬುಲ್‌ಬುಲ್ ಸಮಾವೇಶಗಳಲ್ಲಿ ಹಾಡಿಗೆ ಪ್ರಾಧಾನ್ಯತೆ ಇರಬೇಕು. ಸವಾಲು ಹಾಡುಗಳು, ಸುತ್ತು ಹಾಡುಗಳು, ವಿವಿಧ ಭಾಷೆಗಳ ಹಾಡುಗಳು ದೇಶ ಭಕ್ತಿ ಗೀತೆಗಳು, ಜನಪದ ಗೀತೆಗಳು ಸಮಾವೇಶಗಳ ಮಧ್ಯೆ ಮಧ್ಯೆ ಹಾಡಿಸಬೇಕು. ಸಮಾವೇಶಗಳಲ್ಲಿ ಸಾರ್ವಜನಿಕರು ಮತ್ತು ಆಹ್ವಾನಿತರು ಎಲ್ಲರನ್ನೂ ಹಾಡುವಂತೆ ಪ್ರೇರೇಪಿಸಿ.

**ಹಾಡಿ (3) ಕೂಡಿ ಹಾಡಿರಿ (2)**

**ಹಾಡಿ, ಹಾಡಿ, ಹಾಡಿ**



## ಭಾಗ-2

## ಬುಲ್‌ಬುಲ್‌ಗಳ ಪ್ರಗತಿಪರ ತರಬೇತಿ

# ಪ್ರವೇಶ್ ಪರೀಕ್ಷೆ

### 1. ತಾರಾಕಥೆ

ಒಂದಾನೊಂದು ಕಾಲದಲ್ಲಿ ಸುಂದರವಾದ, ತೃಪ್ತಿಯೇ ಇಲ್ಲದ, ಸಂತೋಷವಿಲ್ಲದ ಚಿಕ್ಕ ಹುಡುಗಿ ಇದ್ದಳು. ಅವಳ ತಂದೆ-ತಾಯಿ ಬಹಳ ಒಳ್ಳೆಯವರಾಗಿದ್ದರು. ಆದರೆ ಬಡವರಾಗಿದ್ದರು.

ಅವಳು ಸದಾ ದುಃಖಿಂತಾಗಿರುವುದು ಕಂಡು ಅವಳನ್ನು ನೋಡಿದವರೆಲ್ಲರೂ "ಅಯ್ಯೋ ಪಾಪದ ಹುಡುಗಿ ಎಂದುಕೊಳ್ಳುತ್ತಿದ್ದರು". ತಂದೆ ಕೆಲಸಕ್ಕೆ ಹೋಗುತ್ತಿದ್ದರು. ಆದರೆ ತರುವ ಸಂಬಳ ಸಾಲುತ್ತಿರಲಿಲ್ಲ.

ಒಂದು ಸಂಜೆ ಶಾಲೆಯಿಂದ ತಾರಾ ಮನೆಗೆ ಬಂದಳು. ತಾಯಿ ಅಡಿಗೆ ಮಾಡುತ್ತಾ ಆಗಾಗ್ಗೆ ಎದ್ದು ಅಳುತ್ತಿರುವ ಮಗುವನ್ನು ಸಮಾಧಾನಪಡಿಸುತ್ತಿದ್ದರು. ಮಗುವಿಗೆ ಹಲ್ಲು ಬರುತಿತ್ತು. ಆದ್ದರಿಂದ ಹಠ ಮಾಡುತ್ತಿತ್ತು. ಮನೆ ತುಂಬಾ ಹರಡಿಕೆ ಇತ್ತು. ತಾರಾ ಕಿಟಕಿಯಿಂದ ಇಣುಕಿದಳು. ಒಳಗಿನ ದೃಶ್ಯ ನೋಡಿ ಮರೆಯಾದಳು. ಅಮ್ಮ ನನ್ನನ್ನು ನೋಡಿದರೆ ಮನೆ ಗುಡಿಸು, ಪಾತ್ರೆ ತಿಕ್ಕು, ಮಗುವನ್ನು ಸಮಾಧಾನ ಮಾಡು ಎಂದು ಕೆಲಸಗಳನ್ನು ಹೇಳುವರು. ನಾನು ಶಾಲೆಗೆ ಹೋಗಿ ಬಂದಿದ್ದೇನೆ. ಸಾಕಾಗಿದೆ, ಉಶ್ಯಪ್ಪ. ನಾನೇಕೆ ಮನೆಕೆಲಸ ಮಾಡಬೇಕು? ಮಕ್ಕಳನ್ನು ಸುಧಾರಿಸಬೇಕು? ಮೆತ್ತಗೆ ಜಾರಿಕೊಂಡು ಹತ್ತಿರವಿದ್ದ ಮಾವಿನ ತೋಪಿಗೆ ಹೋಗಿ ಮರದ ಕೆಳಗೆ ಕುಳಿತಳು. ಆಗ ಬುಲ್‌ಬುಲ್ ಪಕ್ಷಿಯೊಂದು ರೆಕ್ಕೆ ಬಡಿಯುತ್ತಾ ಬಂದು ಅವಳು ಕುಳಿತ ಮಾವಿನ ಮರದ ಕೊಂಬೆಯ ಮೇಲೆ ಕುಳಿತಿತ್ತು. ಪಕ್ಷಿ ಕೇಳಿತು "ಪುಟ್ಟ ಹುಡುಗಿ ಇಲ್ಲಿ ಕುಳಿತು ಏನು ಮಾಡುತ್ತಿರುವೆ?"

"ನನ್ನ ತಂದೆ ಬಡವ. ನಾನು ಸಂತೋಷವಾಗಿರಲು ಸಾಧ್ಯವಿಲ್ಲ. ಏನು ಮಾಡಬೇಕು ಅಂತ ಯೋಚಿಸುತ್ತಿದ್ದೇನೆ. ಬೇರೆ ಹುಡುಗಿಯರಂತೆ ನನ್ನ ಹತ್ತಿರ ಒಡವೆಗಳಿಲ್ಲ, ಉಡಲು ಸಿಲ್ಕ್ ಬಟ್ಟೆಗಳಿಲ್ಲ, ಬರೀ ಹತ್ತಿಬಟ್ಟೆ ಮಾತ್ರ. ಮನೆಗೆ ಹೋದರೆ ಕೆಲಸ, ಕೆಲಸ, ಕೆಲಸ. ನನ್ನ ತಾಯಿ ಕೆಲಸ ಮಾಡಿಸಲು ನಾನು ಬರುವುದನ್ನೇ ಕಾಯುತ್ತಿರುತ್ತಾಳೆ. ನಾನೇಕೆ ಶ್ರೀಮಂತಳಾಗಿರಬಾರದು,

ಸಂತೋಷವಾಗಿರಬಾರದು? ಅನ್ನಿಸುತ್ತೆ. ನನ್ನ ಶಾಲೆಯ ಪುಸ್ತಕದಲ್ಲಿ ರಾಣಿ ಚಿತ್ರವಿದೆ. ಅವಳ ತಲೆಯ ಮೇಲೆ ಅಂದದ ಕಿರೀಟ ಮತ್ತು ಕತ್ತಿನಲ್ಲಿ ಮುತ್ತಿನ ಸರವಿದೆ. ಖಂಡಿತ ಅವಳಿಗೆ ಮಾಡಲು ನನ್ನಹಾಗೆ ದಿನವಿಡೀ ಕೆಲಸವೇ ಇರುವುದಿಲ್ಲ" ಎಂದು ತಾರಾ ವಿಷಾದದಿಂದ, ನಿರಾಶೆಯಿಂದ ಹೇಳಿದಳು.

"ಅಯ್ಯೋ ಪಾಪ ನಿನ್ನ ಬಡತನದಲ್ಲಿ ನಿನಗೆ ಸಂತೋಷವಾಗಿರಲು ಸಾಧ್ಯವಿಲ್ಲ ಅಲ್ಲವೆ ನನ್ನ ಜೊತೆ ಬಾ, ನಿನಗೆ ಈ ಪ್ರಪಂಚದಲ್ಲಿರುವ ಅತಿ ಶ್ರೀಮಂತರನ್ನು ಮತ್ತು ಬಡತನದಲ್ಲಿ ಆನಂದವಾಗಿರುವವರನ್ನು ತೋರಿಸುತ್ತೇನೆ. ನನಗೆ ಹಸಿವು, ಬೇವಿನ ಮರದ ಕೆಲವು ಹಣ್ಣುಗಳನ್ನು ತಿನ್ನಲು ಕೊಡು" ಎಂದು ಬುಲ್‌ಬುಲ್ ಹೇಳಿತು. ತಾರ ಹಣ್ಣುಗಳನ್ನು ಆರಿಸಿ ತಂದಳು. ಪಕ್ಷಿ ಹಾರಿಬಂದು ಕೆಳಗೆ ಕುಳಿತಿತ್ತು. ಪಕ್ಷಿಗೆ ಹಣ್ಣುಗಳನ್ನು ನೀಡಿದಳು. ಅವುಗಳನ್ನು ಪಕ್ಷಿ ತಿಂದಿತು. ಆಶ್ಚರ್ಯ! ಪಕ್ಷಿ ನನ್ನನ್ನು ನೋಡ್ತಾ ಗರುಡನಷ್ಟು ದೊಡ್ಡದಾಗಿ ಬೆಳೆಯಿತು. ಆದರೆ ಅದೇ ನೀಲಿಬಣ್ಣ.

ತಾರಾ ಈಗ "ನನ್ನ ಬೆನ್ನ ಮೇಲೆ ಹತ್ತು ನನ್ನ ರೆಕ್ಕೆಯ ಮಧ್ಯ ಕುಳಿತುಕೋ ದೂರ ದೂರಕ್ಕೆ ಹಾರಿ ಹೋಗೋಣ". ತಾರಾ ಪಕ್ಷಿಯ ಮೃದುವಾದ ಬೆನ್ನಮೇಲೆ ಬೆಚ್ಚಗೆ ಕುಳಿತಳು. "ಗಟ್ಟಿಯಾಗಿ ಹಿಡಿದುಕೊ" ಎಂದು ಹೇಳುತ್ತಾ ತನ್ನ ದೊಡ್ಡ ರೆಕ್ಕೆಯನ್ನು ಬಡಿಯುತ್ತಾ ಮೇಲಕ್ಕೆ ಹಾರಿತು. ಮೊದಲು ಹೆದರಿಕೆಯಾಯಿತು, ಗಟ್ಟಿಯಾಗಿ ಹಿಡಿದುಕೊಂಡಳು. ತಲೆ ಗಿರ್ ಅಂತ ಸುತ್ತಿತು. ಬೇಗನೆ ಎಲ್ಲವೂ ಸರಿಯಾಯಿತು. ಆನಂದದಿಂದ ಗಾಳಿಯಲ್ಲಿ ಪಕ್ಷಿಯ ಮೇಲೆ ಕುಳಿತು ಹಾರಲಾರಂಭಿಸಿದಳು. ಆಸಕ್ತಿಯಿಂದ ಕೆಳಗೆ ನೋಡಿದಳು, ಮೇಲೆ ನೋಡಿದಳು. ಕಾಡು ಮತ್ತು ಬಯಲುಗಳ ಮೇಲೆ ಹಾರಿದರು. ಮರಗಿಡಗಳು, ಗದ್ದೆಗಳು ನೆಲಹಾಸಿನ ಮೇಲೆ ಹಸಿರು ಬಣ್ಣದ ಚಿತ್ತಾರದಂತೆ ಕಂಡವು. ಅಂಕುಡೊಂಕಾಗಿ ಹರಿಯುವ ನದಿ ಕಂಡಳು. ಕಂದು, ಕಪ್ಪು, ನೀಲಿ ಹಸಿರು ಬಣ್ಣದ ಚಿತ್ತಾರಗಳ ಮಧ್ಯೆ ಚಲಿಸುತ್ತಿರುವ ಚುಕ್ಕಿ ಕಂಡಳು. ಉಳುತ್ತಿದ್ದ ಮತ್ತು ಬಿತ್ತುತ್ತಿದ್ದ ಮನುಷ್ಯರು. ಹಳ್ಳಿ ಮತ್ತು ಪಟ್ಟಣಗಳ ಮೇಲೆ ಹಾರಿದರು. ಹಾರುತ್ತಾ, ಹಾರುತ್ತಾ, ತಾರಾ ನಿದ್ರಿಸಿದಳು.

ತಾರಾ ಎದ್ದಾಗ, ಪಕ್ಷಿ, "ನನ್ನ ಬಲರೆಕ್ಕೆಯ ಕೆಳಗೆ ಕೈ ಹಾಕು, ಅಲ್ಲಿ ಸ್ವಲ್ಪ ಬಿಳಿಯ ಪುಡಿ ಇದೆ. ಅದನ್ನು ನನ್ನ ತಲೆಯ ಮೇಲೆ ತಿಕ್ಕು, ನಿನ್ನ ಹಣೆಯ ಮೇಲೆ ತಿಕ್ಕು" ಎಂದಿತು. ತಾರಾ ಕುತೂಹಲದಿಂದ ಏಕೆ? ಎಂದು ಕೇಳಿದಳು. "ಅದು ಮಾಯಾಪುಡಿ ನಮ್ಮನ್ನು ಅದೃಶ್ಯ (Invisible) ಮಾಡುತ್ತದೆ" ಎಂದು ಬುಲ್‌ಬುಲ್

ಪಕ್ಷಿ ಹೇಳಿತು. ನಾನು ನಿನ್ನನ್ನು ನಗರದಲ್ಲಿ ದೊಡ್ಡ ಮನೆಗೆ ಕರೆದುಕೊಂಡು ಹೋಗಬೇಕು. ದೊಡ್ಡ ಪಕ್ಷಿ ಪುಟ್ಟ ಹುಡುಗಿ ಒಟ್ಟಾಗಿ ನಡೆಯುವುದನ್ನು ನೋಡಿ ಜನರಿಗೆ ಆಶ್ಚರ್ಯವಾಗಬಹುದು. "ಹೌದು, ನೀನು ಹೇಳುವುದೂ ಸರಿ" ಎಂದು ತಾರಾ ನಕ್ಕಳು. ಬುಲ್‌ಬುಲ್ ಪಕ್ಷಿ ಹೇಳಿದಂತೆ ಮಾಡಿದಳು. ಬೇಗನೆ ಒಂದು ರಸ್ತೆಯಲ್ಲಿ ಇಳಿದರು. ತುಂಬಾ ಜನರು ಓಡಾಡುತ್ತಿದ್ದರು. ಆದರೆ ಯಾರೂ ಇವರನ್ನು ಗಮನಿಸಲಿಲ್ಲ. ಇದನ್ನು ನೋಡಿ "ನಾವು ನಿಜಕ್ಕೂ ಅಗೋಚರರೇ? ಎಂದು ಕೇಳಿದಳು. ಹೌದು ನಾವು ಕಾಣುತ್ತಿಲ್ಲ ಎಂದು ಪಕ್ಷಿ ಹೇಳಿತು. ಬಾ ನಿನ್ನನ್ನು ನೋಡಲು ನಿನ್ನ ಧ್ವನಿ ಕೇಳಲು ಯಾರಿಗೂ ಸಾಧ್ಯವಿಲ್ಲ" ಎಂದಿತು. ಒಂದು ಮನೆಯ ಮುಂದೆ ಪಕ್ಷಿ ನಿಂತು "ಬಾ ಒಳಗೆ ಹೋಗೋಣ" ಎಂದು ಕರೆಯಿತು. ಮೊದಲು ತಾರಾಗೆ ಯಾರಾದರೂ ನೋಡಿದರೆ! ಎಂದು ಭಯವಾಯಿತು. ನಂತರ ನಾವು ಯಾರಿಗೂ ಕಾಣುತ್ತಿಲ್ಲ ಎಂಬ ನೆನಪು ಬಂದು ಭಯ ದೂರವಾಯಿತು.

ಒಂದು ಭವ್ಯವಾದ ಕೋಣೆ ಪ್ರವೇಶಿಸಿದರು. ಒಂದು ಪುಟ್ಟ ಹುಡುಗಿ ಅಂದವಾದ ಮೃದುವಾದ ಹಾಸಿಗೆಯ ಮೇಲೆ ಕುಳಿತಿದ್ದಳು. ದಾಸಿಯು ಚಿನ್ನಾಭರಣದ ಪೆಟ್ಟಿಗೆ ಇಟ್ಟುಕೊಂಡು ಒಂದಾದ ಮೇಲೆ ಒಂದು ಆಭರಣ ತೆಗೆದು "ನೋಡು, ಎಷ್ಟು ಚೆನ್ನಾಗಿದೆ. ನಿನ್ನ ತಂದೆ ಕಳುಹಿಸಿದ್ದಾರೆ ಹಾಕಿಕೊ" ಎನ್ನುತ್ತಿದ್ದಳು. ಆಸಕ್ತಿ ಇಲ್ಲದೆ ರಾಜಕುಮಾರಿ "ಹೌದು, ಹೌದು ಬಹಳ ಸುಂದರವಾಗಿವೆ" ಎಂದಳು. ಬಾಗಿಲು ತೆಗೆಯಿತು ಮತ್ತೊಂದು ದಾಸಿ ಸುಂದರವಾದ ಗುಲಾಬಿ ಬಣ್ಣದ ಚಿನ್ನದ ಅಂಚಿನ ಉಡುಗೆ ತೋರಿಸಿ "ರಾಜಕುಮಾರಿ, ಈ ಬೆಲೆಬಾಳುವ ಉಡುಗೆಯನ್ನು ನಿಮ್ಮ ತಾಯಿ ಶುಭಾಶಯಗಳೊಡನೆ ಕಳುಹಿಸಿದ್ದಾರೆ" ಎಂದಳು. "ಬಹಳ ಚೆನ್ನಾಗಿದೆ. ಆದರೆ ನನಗೆ ನೀಲಿಬಣ್ಣದ ಉಡುಗೆ ಬೇಕಾಗಿತ್ತು" ಎಂದು ಆಸಕ್ತಿ ಇಲ್ಲದೆ ಹೇಳಿದಳು. ಅದನ್ನು ಕಪಾಟಿನಲ್ಲಿಡು. ಅಮ್ಮನಿಗೆ ನನ್ನ ಪ್ರಣಾಮಗಳನ್ನು ತಿಳಿಸು" ಎಂದಳು.

ರಾಜಕುಮಾರಿ ಈ ಶ್ರೀಮಂತಿಕೆ, ಉಪಚಾರಗಳಿಂದ ಬೇಸತ್ತು "ಓ ದೇವರೆ ನಾನೇಕೆ ಬಡ ಹುಡುಗಿಯಾಗಿ ಎಲ್ಲರ ಜೊತೆ ಆಡುತ್ತಾ ಓಡುತ್ತಾ ಶಾಲೆಗೆ ಹೋಗಲು ಸಾಧ್ಯವಿಲ್ಲ? ಎಲ್ಲರಂತೆ ನಾನೇಕೆ ಕುಟ್ಟಿ, ರುಬ್ಬಿ, ಬೀಸಿ ಅಡುಗೆ ಮಾಡಲಾಗುತ್ತಿಲ್ಲ?"

"ಯೋಚಿಸಿ! ರಾಜಕುಮಾರಿ ಹೀಗೆಲ್ಲಾ ಮಾಡಿದಲ್ಲಿ ನಿಮ್ಮ ಬೆಲೆಬಾಳುವ ಸುಂದರ ಉಡುಗೆ ಮಾಸುವುದಿಲ್ಲವೇ? ಕೆಲಸ ಮಾಡಿ ಕೈ ಒರಟಾಗುವುದಿಲ್ಲವೇ? ಬೆಂಕಿಯಿಂದ ಏಳುವ ಹೊಗೆ ಸರದ ಮುತ್ತುಗಳನ್ನು ಹಾಳು ಮಾಡುವುದಿಲ್ಲವೇ" ಎಂದಳು ದಾಸಿ.

"ನನಗೆ ಮುತ್ತು ಮತ್ತು ರೇಷ್ಮೆಗಳು ಬೇಡ. ನನಗೆ ಮಾಡಲು ಕೆಲಸ ಬೇಕು" ಎಂದಳು ರಾಜಕುಮಾರಿ.

"ರಾಜಕುಮಾರಿ ಸಂತೋಷವಾಗಿದ್ದಂತೆ ಇಲ್ಲ, ಅಲ್ಲವೇ?" ಎಂದು ಬುಲ್‌ಬುಲ್ ತಾರಾಳಿಗೆ ಕೇಳಿತು. ಬಾ ಬಾ ಬೇರೆ ಶ್ರೀಮಂತರನ್ನು ತೋರಿಸುತ್ತೇನೆ. ಅರಮನೆಯಿಂದ ಇಬ್ಬರೂ ಹೊರಬಂದರು. ತಾರಾ ಬುಲ್‌ಬುಲ್ ಪಕ್ಷಿ ಬೆನ್ನೇರಿದಳು. ಇಬ್ಬರು ದೂರದ ನಗರಕ್ಕೆ ಹಾರಿದರು. ಇಲ್ಲಿ ಬೇರೆಯದೆ ರೀತಿಯಲ್ಲಿ ಜೀವಿಸುತ್ತಿರುವ ರಾಜಕುಮಾರಿಯನ್ನು ಕಂಡಳು. ರಾಜಕುಮಾರಿ ಮಲಗಲು ಹೋಗುತ್ತಿದ್ದಾಳೆ. ಬಾ ಅವಳ ಕೊಠಡಿಗೆ ಹೋಗೋಣ. ಯಾರೂ ಅವರನ್ನು ಗಮನಿಸಲಿಲ್ಲ. ಒಂದು ಅಂದದ ಚೆಂದದ ಕೊಠಡಿಯನ್ನು ಪ್ರವೇಶಿಸಿದರು. ಅಲ್ಲಿ ತಾಯಿಯ ತೊಡೆಮೇಲೆ ಪುಟ್ಟ ಹುಡುಗಿ ಕುಳಿತಿದ್ದಳು. "ಇಂದು ಹೇಗಿತ್ತು? ದಿನ ಸಂತಸವಾಗಿತ್ತೆ?"

"ಚೆನ್ನಾಗಿತ್ತಮ್ಮ. ಬೆಳಿಗ್ಗೆ ಚೆನ್ನಾಗಿ ಓದಿದೆ. ಬೇರೆ ಬೇರೆ ದೇಶಗಳ ಬಗ್ಗೆ ಓದಿದೆ. ನಂತರ ಹೊರಗೆ ಹೋದೆ. ತಿನ್ನಲಿಕ್ಕೆ ಸಹ ಇಲ್ಲದ ಪುಟ್ಟ ಹುಡುಗಿಯನ್ನು ಭೇಟಿಯಾದೆ, ನನಗೆ ನೀನು ಪೆಪ್ಪರ್‌ಮೆಂಟ್, ಚಾಕೊಲೇಟ್ ತೆಗೆದುಕೊಳ್ಳಲು ಕೊಟ್ಟ ಒಂದುರೂಪಾಯಿಯನ್ನು ಕೊಟ್ಟೆ. ಅವಳ ಮುಖ ಆನಂದದಿಂದ ಅರಳಿತು. ಅವಳ ಆನಂದ ನೋಡಿ ನನಗೂ ಆನಂದವಾಯಿತು. ನನಗೆ ಪೆಪ್ಪರ್‌ಮೆಂಟ್ ಕೊಳ್ಳಬೇಕೆಂಬ ನೆನಪು ಸಹ ಬರಲೇ ಇಲ್ಲ. ನಂತರ ಮಧ್ಯಾಹ್ನ ಆಸ್ಪತ್ರೆಗೆ ಹೋಗಿದ್ದೆ. ರೋಗದಿಂದ ನರಳುತ್ತಿದ್ದ ಮತ್ತು ದುಃಖಿತರಾದ ರೋಗಿಗಳನ್ನು ನೋಡಿದೆ. ಅವರಿಗೆ ನಾನು ಕೆಲವು ಚಿತ್ರಗಳು ಮತ್ತು ಕಿತ್ತಲೆಹಣ್ಣುಗಳನ್ನು ತೆಗೆದುಕೊಂಡು ಹೋಗಿದ್ದೆ. ಅವರಿಗೆಲ್ಲಾ ಸಂತೋಷವಾಯಿತು. ಅವರ ಸಂತೋಷ ನೋಡಿ ನನಗೂ ಸಂತಸವಾಯಿತು. ಮನೆಗೆ ಬಂದು ಅಡುಗೆಮನೆಗೆ ಹೋಗಿದ್ದೆ. ಚಪಾತಿ ಮಾಡುವುದನ್ನು ಕಲಿತೆ. ಅದೇನು ಅಷ್ಟು ಚೆನ್ನಾಗಿರಲಿಲ್ಲ. ಪುನಃ ನಾಳೆ ಪ್ರಯತ್ನಿಸುತ್ತೇನೆ ನೀನೆ ಹೇಳಿದೆಯಲ್ಲ ಅಮ್ಮ "ಅಡುಗೆ ಮಾಡಲು ಬಾರದಿದ್ದರೆ ಹೆಣ್‌ತನಕ್ಕೆ ಅವಮಾನ ಅಂತ" ತಾಯಿಯನ್ನು ಕೈಗಳಿಂದ ಬಳಸಿ ಪ್ರೀತಿಯಿಂದ ಮುತ್ತಿಟ್ಟು, ಓ ನನ್ನ ಅಮ್ಮ, ರಾಣಿ ಸಾಹೇಬರೇ, ಇಂದು ತಾವು ಏನೇನು ಮಾಡಿದಿರಿ?" ಎಂದು ಕೇಳಿದಳು.

ರಾಣಿ ಹೇಳಿದಳು, "ಹೌದು, ಆಯಾಸವಾಗಿ ಕಾಣುತ್ತಿದ್ದೀರಿ". ನನಗೆ ಆಯಾಸವಾಗಿದೆ. ತುಂಬಾ ಕೆಲಸವಿತ್ತು ಬಿಡುವಿರಲಿಲ್ಲ. ಇಂದು ಬೇರೊಬ್ಬ ರಾಜ ರಾಣಿಯರು ರಾತ್ರಿ ಭೋಜನಕ್ಕೆ ಬರುತ್ತಿದ್ದಾರೆ. ನಾನು ಹೋಗಿ ಶೃಂಗಾರವಾಗಬೇಕು.

ಓ ನನ್ನ ಮುದ್ದಿನ ಮಗಳೆ ರಾತ್ರಿ ಮಲಗುವ ವೇಳೆಗೆ ನನಗೆ ಬಹಳ ಆಯಾಸವಾಗಿರುತ್ತದೆ".

ಆ ವೇಳೆಗೆ ಬುಲ್‌ಬುಲ್ ತಾರಾಳನ್ನು ಮುಟ್ಟಿ "ಇನ್ನೊಂದು ಮನೆ ನೋಡಬೇಕೆಂದರೆ ಬಾ ಹೋಗೋಣ" ಎಂದಿತು.

ತಾರಾ ಬುಲ್‌ಬುಲ್ ಬೆನ್ನಿನ ಮೇಲೆ ಕುಳಿತು "ನನಗೆ ರಾಣಿ ಇಷ್ಟವಾದಳು, ಕರುಣಾಳುವಿನಂತೆ ಕಾಣುತ್ತಾಳೆ. ರಾಣಿಯಾಗಿ ಇಷ್ಟು ಕಷ್ಟಪಟ್ಟು ಕೆಲಸ ಮಾಡುತ್ತಾರೆ ಎಂಬುದು ಆಶ್ಚರ್ಯ! ಆದರೆ ಸ್ವಲ್ಪವೂ ಆಯಾಸವಾದಂತೆ ಕಾಣುತ್ತಿಲ್ಲ" ಎಂದು ಹೇಳಿದಳು.

ಬುಲ್‌ಬುಲ್ ಹೌದೆನ್ನುತ್ತಾ, ನೀನು ಹೊಸ ವಿಚಾರಗಳನ್ನು ತಿಳಿಯುತ್ತಿದ್ದೀಯ ನಾನು ನಿನ್ನನ್ನು ಇವರೆಲ್ಲರಿಗಿಂತ ಭಿನ್ನವಾದ ರಾಣಿಮನೆಗೆ ಕರೆದೊಯ್ಯುತ್ತೇನೆ ಎನ್ನುತ್ತಾ ಇನ್ನೊಂದು ನಗರದಲ್ಲಿನ ಚಿಕ್ಕಮನೆ ಬಳಿ ಇಳಿಸಿತು. ಇಬ್ಬರೂ ನಿಶಬ್ದವಾಗಿ ಮನೆಯೊಳಗೆ ಕಾಲಿಟ್ಟರು. ಇದು ಬಡಮನೆಯಾಗಿತ್ತು. ಪುಟ್ಟ ಮಗುವಿನೊಡನೆ ಮಂಚದ ಮೇಲೆ ತಾಯಿ ಮಲಗಿದ್ದಳು. ತಾರಾನ ವಯಸ್ಸಿನ ಮಗಳು ಅಡುಗೆ ಮಾಡುವುದರಲ್ಲಿ ನಿರತಳಾಗಿದ್ದಳು. ಹಿತ್ತಾಳೆ ಪಾತ್ರೆಗಳು ಬೆಂಕಿಯ ಬೆಳಕಿನಲ್ಲಿ ಚಿನ್ನದಂತೆ ಫಳ ಫಳ ಹೊಳೆಯುತ್ತಿದ್ದವು. ಅಡುಗೆಯ ಮಧುರವಾದ ವಾಸನೆ ಹೊರಹೊಮ್ಮುತ್ತಿತ್ತು.

ಹೊರಗಿನಿಂದ "ರಾಣಿ! ರಾಣಿ! ನೀನೆಲ್ಲಿ ಇದ್ದೀಯ ಎಂಬ ಕೂಗು ಕೇಳಿಸಿತು. ಹುಡುಗಿ ಚಂಗ್ ಎಂದು ಹಾರಿ ಬಾಗಿಲ ಬಳಿಗೆ ಓಡಿದಳು "ಬಂದೇ ಬಿಟ್ಟೆ ಅಪ್ಪ, ಎಲ್ಲಾ ಸರಿಯಾಗಿದೆ. ಅಮ್ಮ ಮಗು ಮಲಗಿದ್ದಾರೆ. ನನ್ನ ದಿನ ಚೆನ್ನಾಗಿ ಕಳೆಯಿತು. ನಾನು ಮನೆಯನ್ನು ಇಷ್ಟು ಅಚ್ಚುಕಟ್ಟಾಗಿ ಅಂದವಾಗಿಡುತ್ತೇನೆಂದು ನೀವು ನಂಬಿರಲಿಲ್ಲ ಅಲ್ಲವೇ? ನಾನು ಬಹಳ ಬಿಸಿಯಾಗಿದ್ದೆ. ನಾನು ಮನೆಗುಡಿಸಿದೆ, ಮಗುವಿನ ಬಟ್ಟೆ ಒಗೆದೆ, ಅಮ್ಮನಿಗೆ ಗಂಜಿ ಮಾಡಿದೆ. ಈಗ ನಮಗೆ ಅಡುಗೆ ಮಾಡುತ್ತಿದ್ದೇನೆ. ಅಡುಗೆ ರುಚಿಯಾಗಿರುತ್ತದೆಂದು ಆಶಿಸುತ್ತಿದ್ದೇನೆ". ತಂದೆ ಮಗಳಿಗೆ ಮುತ್ತಿಟ್ಟರು, "ಹಾಗಾದರೆ ನಿನಗೆ ಕೂರಲು ಸಮಯವಿಲ್ಲ ಅಥವಾ ಆಡಲು ಸಮಯವಾಗಲಿಲ್ಲ ಅಲ್ಲವೇ" ಎಂದರು. ಪುಟ್ಟ ಮಗಳು ಹೆಮ್ಮೆಯಿಂದ "ಊಹುಂ ಒಂದು ನಿಮಿಷವೂ ಸಿಗಲಿಲ್ಲ" ಎಂದಳು. "ಆದರೆ ಆಡುವುದಕ್ಕಿಂತ ಕೆಲಸ ಮಾಡುವುದೇ ಚೆನ್ನ. ನಿನಗೆ ಮತ್ತು ಅಮ್ಮನಿಗೆ ಸಹಾಯ ಮಾಡುವುದು ನನಗೆ ಸಂತೋಷ". ನಾನು ಕೆಲಸ ಮಾಡುತ್ತಾ ಅಮ್ಮ ಮತ್ತು ಪಾಪು ಆರಾಮವಾಗಿರುವುದನ್ನು ನೋಡಲು ಸಂತೋಷವಾಗುತ್ತದೆ. ಸುಮ್ಮನೆ ಕುಳಿತು

ಸಮಯ ಹಾಳುಮಾಡುವುದಕ್ಕಿಂತ ಹೀಗೆ ಕೆಲಸ ಮಾಡುತ್ತಿರುವುದು ನನಗೆ ಸಂತೋಷ".

ತಾರಾ ಬುಲ್‌ಬುಲ್ ಕಡೆ ತಿರುಗಿ, "ನನಗೆ ಬೇಗನೆ ಮನೆಗೆ ಕರೆದುಕೊಂಡು ಹೋಗು ಎಂದಳು. ನಾನೂ ಹೀಗೆ ತಂದೆ-ತಾಯಿಗಳಿಗೆ ಸಹಾಯ ಮಾಡಬೇಕು. ಈ ಹುಡುಗಿಯಂತೆ ನಾನು ಕೂಡ ಮನೆಕೆಲಸಗಳಲ್ಲಿ ಸಹಾಯ ಮಾಡುತ್ತೇನೆ". ಬುಲ್‌ಬುಲ್ ಪಕ್ಷಿ, "ಹಾಗಾದರೆ ನನ್ನ ಬೆನ್ನಮೇಲೆ ಹತ್ತು, ಕಣ್ಣುಮುಚ್ಚು" ಎಂದಿತು. ಬುಲ್‌ಬುಲ್ ಮತ್ತು ತಾರ ಕ್ಷಣಾರ್ಧದಲ್ಲಿ ಮನೆಮುಂದೆ ಇಳಿದರು. "ನಾನು ಬಂದಿದ್ದೇನೆ ಬಾಗಿಲು ತೆಗೆ ಎಂದಳು" ತಾರಾ.

ತಾಯಿ ತಾರಾನನ್ನು ನೋಡಿ "ಮಗಳೆ, ಎಲ್ಲಿ ಹೋಗಿದ್ದೆ? ಎಂದಳು. "ಅಮ್ಮಾ ನಾನು ಸಂತೋಷವನ್ನು ಹುಡುಕಿಕೊಂಡು ಹೋಗಿದ್ದೆ. ಸಂತೋಷ ಮನೆಯಲ್ಲೇ ಇದೆ ಎಂದು ತಿಳಿದೆ" ಎಂದು ಹೇಳುತ್ತಾ ತಾರಾ ಮನೆಯೆಲ್ಲಾ ಓಡಾಡಿದಳು. ಕಸಗುಡಿಸಿದಳು, ಒರೆಸಿದಳು, ಪಾತ್ರೆ ತೊಳೆದಳು, ಮಗುವಿಗೆ ಲಾಲಿ ಹಾಡಿದಳು. ನಂತರ ತಾಯಿಗೆ ತನ್ನ ಸಾಹಸ ಹೇಳಿದಳು. "ಸಂತಸ ಚಿನ್ನಾಭರಣ, ರೇಷ್ಮೆ ಬಟ್ಟೆಗಳಲ್ಲಿ ಇಲ್ಲ. ಆದರೆ ಇತರರಿಗೆ ಸಂತೋಷಪಡಿಸುವಲ್ಲಿದೆ".

ಬುಲ್‌ಬುಲ್ ಹಕ್ಕಿ ಮರದ ಮೇಲೆ ಕುಳಿತು ಇದನ್ನೆಲ್ಲಾ ನೋಡುತ್ತಾ ಆನಂದವಾಗಿ ಹಾಡಿತು.

ಅಂದಿನಿಂದ ತಾರಾಳಷ್ಟು ಸಂತೋಷವಾಗಿದ್ದ ಮತ್ತೊಂದು ಹುಡುಗಿ ಇರಲಿಲ್ಲ. ಯಾವಾಗಲೂ ಮನೆಗೆ, ಸ್ನೇಹಿತರಿಗೆ ಸಹಾಯ ಮಾಡಲು ಸಿದ್ಧವಾಗಿರುತ್ತಿದ್ದಳು. ತಾಯಿಗಂತು ಮಗಳ ಬಗ್ಗೆ ಬಹಳ ಹೆಮ್ಮೆ ಎನ್ನಿಸಿತು.

**ಬುಲ್‌ಬುಲ್ ಪಕ್ಷಿಯ ಸಂದೇಶ**

**ಜಾಣರಾಗಿ, ಜಾಣರಾಗಿ**
**ನಿಮ್ಮ ಕೆಲಸ ನೀವೇ ಮಾಡಿ**
**ಜಾಣರಾಗಿ, ಜಾಣರಾಗಿ**
**ಆನಂದದಿ ಕೆಲಸಮಾಡಿ**
**ಜಾಣರಾಗಿ, ಜಾಣರಾಗಿ**
**ಇತರರಿಗೆ ಸಹಾಯಮಾಡಿ**
**ಜಾಣರಾಗಿ ಜಾಣರಾಗಿ**
**ಕಲಿಯುತ್ತಾ ನಲಿಯಿರಿ**

ಜಾಣರಾಗಿ ಜಾಣರಾಗಿ
ಒಟ್ಟಾಗಿ ಹಾಡಿ ಆಡಿ
ಜಾಣರಾಗಿ ಜಾಣರಾಗಿ
ನಮ್ಮಂತೆ ಬುಲ್‌ಬುಲ್‌ಗಳಾಗಿ
ಟುವ್ವಿ ಟುವ್ವಿ ಟುವ್ವಿ

## 1. ಪ್ರತಿಜ್ಞೆ

ನಾನು ನನ್ನ ಕೈಲಾದ ಮಟ್ಟಿಗೆ ದೇವರಿಗೂ ಮತ್ತು ದೇಶಕ್ಕೂ ಕರ್ತವ್ಯ ಸಲ್ಲಿಸುತ್ತೇನೆ. ಬುಲ್‌ಬುಲ್ ನಿಯಮವನ್ನು ಪಾಲಿಸುತ್ತೇನೆ ಮತ್ತು ದಿನಕ್ಕೊಂದು ಒಳ್ಳೆ ಕಾರ್ಯ ಮಾಡುತ್ತೇನೆ.

ದೇವರು ಎಲ್ಲೆಲ್ಲಿಯೂ ಇದ್ದಾನೆ. ದೇವರಿಗೆ ಪ್ರಾರ್ಥಿಸುವ ಮೂಲಕ, ಇತರರಿಗೆ ಸಹಾಯ ಮಾಡುವ ಮೂಲಕ, ದೊಡ್ಡವರನ್ನು ಸನ್ಮಾನಿಸುವ ಹಾಗು ಗೌರವಿಸುವ ಮೂಲಕ, ದೇವರ ಸೃಷ್ಟಿಯನ್ನು ಮೆಚ್ಚುವ ಮೂಲಕ ದೇವರಿಗೆ ಕರ್ತವ್ಯ ಸಲ್ಲಿಸುತ್ತೇವೆ. ದೇಶದ ಬಗ್ಗೆ ಅಭಿಮಾನ ಬೆಳೆಸಿಕೊಳ್ಳುವ ಮೂಲಕ, ಭವಿಷ್ಯದಲ್ಲಿ ಉಪಯುಕ್ತ ಮತ್ತು ಒಳ್ಳೆಯ ನಾಗರೀಕರಾಗುವ ಮೂಲಕ ದೇವರಿಗೆ ಕರ್ತವ್ಯ ಸಲ್ಲಿಸುತ್ತೇನೆ.

## 2. ನಿಯಮ

1. ಬುಲ್‌ಬುಲ್‌ಗಳು ವಿಧೇಯಳು
2. ಬುಲ್‌ಬುಲ್‌ಗಳು ಪರಿಶುದ್ಧಳು ಮತ್ತು ವಿನಯವಂತಳು

ಬುಲ್‌ಬುಲ್‌ಗಳು ಹಿರಿಯರು ಹೇಳಿದ ಕೆಲಸವನ್ನು ವಿಧೇಯತೆಯಿಂದ ಮಾಡುತ್ತಾರೆ, ಹೇಳಿದ ಮಾತನ್ನು ಕೇಳುತ್ತಾರೆ.

ಬುಲ್‌ಬುಲ್ ತನ್ನ ದೇಹ ಮತ್ತು ಸಾಮಾನುಗಳನ್ನು ಸ್ವಚ್ಛವಾಗಿ ಇಟ್ಟುಕೊಳ್ಳುತ್ತಾರೆ. ಕೂದಲನ್ನು ಸ್ವಚ್ಛವಾಗಿಡುತ್ತಾರೆ. ಬಾಚಿ ಅಂದಗೊಳಿಸುತ್ತಾರೆ. ಎಲ್ಲವನ್ನೂ ಅಚ್ಚುಕಟ್ಟಾಗಿಡುತ್ತಾರೆ. ಉಗುರು ಕತ್ತರಿಸುತ್ತಾರೆ. ಹಲ್ಲನ್ನು ಸ್ವಚ್ಛಗೊಳಿಸುತ್ತಾರೆ. ಷೂಗಳನ್ನು ಹೊಳಪುಗೊಳಿಸುತ್ತಾರೆ.

ಬುಲ್‌ಬುಲ್ ತನ್ನ ನಡೆ ನುಡಿಯಲ್ಲಿ, ಕೆಲಸದಲ್ಲಿ ವಿನಯವನ್ನು ಪಾಲಿಸುತ್ತಾರೆ. ಅವರು ತಂದೆತಾಯಿ, ಗುರುಗಳು, ಹಿರಿಯರಲ್ಲಿ ಮತ್ತು ಸ್ನೇಹಿತರ ಜೊತೆ ವಿನಯದಿಂದ ವರ್ತಿಸುತ್ತಾರೆ.

## 3. ಧ್ಯೇಯ

ಬುಲ್‌ಬುಲ್‌ಗಳ ಧ್ಯೇಯ "ನಿನ್ನ ಕೈಲಾದಷ್ಟು ಒಳ್ಳೆಯದನ್ನು ಮಾಡು" (ಉತ್ತಮವಾದುದನ್ನು) (Do your Best). ಆಟವಾಗಲಿ ಕೆಲಸವಾಗಲಿ ಉತ್ತಮ ರೀತಿಯಲ್ಲಿ ಮಾಡಲು ಪ್ರಯತ್ನಿಸುತ್ತಾರೆ.

ವಿಶೇಷವಾದ ಸಂದರ್ಭಗಳಲ್ಲಿ ಅತಿಥಿಗಳು ಹಿಂಡಿಗೆ ಭೇಟಿ ನೀಡಿದಾಗ ಘನವಂದನೆ ಸಲ್ಲಿಸುವರು.

ಬುಲ್‌ಬುಲ್‌ಗಳು ತಮ್ಮ ಒಂದು ವೃತ್ತ ರಚಿಸುತ್ತಾರೆ. ತಮ್ಮ ಮುಂಗಾಲಿನ ಮೇಲೆ ಕುಳಿತುಕೊಳ್ಳುತ್ತಾರೆ. ಎರಡು ಕೈಯಲ್ಲಿ ಎರಡು ಬೆರಳನ್ನು ಚಾಚಿ ವಂದನಾ ಮುದ್ರೆ ಮಾಡಿ ಮುಂದಕ್ಕೆ ತಂದು ನೆಲಕ್ಕೆ ಎರಡು ಕೈ ಬೆರಳು ಮುಟ್ಟಿಸುತ್ತಾರೆ. ಅತಿಥಿಗಳನ್ನು ವೃತ್ತದ ಮಧ್ಯ ನಿಲ್ಲಿಸುತ್ತಾರೆ. ನಂತರ "ಟುವ್ವಿ ಟು ಊ ಉ ಎಂದು ಮೊದಲ ಬಾರಿಗೆ ಹೇಳಿ ಮಂಡಿ ಎತ್ತರಕ್ಕೆ ಬೆರಳು ತರುತ್ತಾರೆ. ಎರಡನೇ ಬಾರಿ ಹೇಳಿ ಸೊಂಟದ ಮಟ್ಟಕ್ಕೆ ಕೈ ತರುತ್ತಾರೆ. ಮೂರನೇ ಬಾರಿ ಹೇಳುತ್ತಾ ತಲೆಯ ಮೇಲೆ ಕೈ ಎತ್ತಿ ಚಪ್ಪಾಳೆ ತಟ್ಟುತ್ತಾರೆ. ಸಾವಧಾನ್‌ದಲ್ಲಿ ನಿಶ್ಯಬ್ಧವಾಗಿ ನಿಲ್ಲುತ್ತಾರೆ. ಸೆಲ್ಯುಟ್ ಮಾಡಿ ಮತ್ತು ಕೈಲಾದಷ್ಟು ಒಳ್ಳೆಯದು ಮಾಡುತ್ತೇನೆ ಎಂದು ಹೇಳಿ ಟುವಿ ಟು ಉ ಉ ಧ್ವನಿ ಏರಿಸುತ್ತಾ ಮೂರನೇ ಬಾರಿ ಜೋರಾಗಿ ಹೇಳಿ ನಂತರ ಇಳಿಸುತ್ತಾ ಧ್ವನಿ ಗಾಳಿಯಲ್ಲಿ ಸೇರಿ ಹೋಗುವಂತೆ ನಾದ ಮಾಡುತ್ತಾರೆ".

## 4. ಬುಲ್‌ಬುಲ್ ಸೆಲ್ಯುಟ್

ಸಂಸ್ಥೆಯ ಧ್ವಜಕ್ಕೆ ಸಂಸ್ಥೆಯ ಸ್ನೇಹಿತರು ಹಾಗು ಹಿರಿಯರನ್ನು ವಂದಿಸಲು/ ಶುಭಕೋರಲು ಸಾವಧಾನದಲ್ಲಿ ನಿಂತು ವಂದಿಸಬೇಕು. ಪ್ರತಿಜ್ಞೆ ಮಾಡುವಾಗ ಮತ್ತು ಪುನರುಚ್ಚರಿಸುವಾಗ ಈ ಹಸ್ತಮುದ್ರೆಯನ್ನು ಭುಜಮಟ್ಟಕ್ಕೆ ಎತ್ತಿರಬೇಕು. ಇದನ್ನು ಬುಲ್‌ಬುಲ್ ಗುರುತು ಎಂದು ಕರೆಯಲಾಗಿದೆ.

## 5. ಎಡಗೈ ಹಸ್ತಲಾಘವ

ಒಂದು ಬುಲ್‌ಬುಲ್ ಇನ್ನೊಂದು ಬುಲ್‌ಬುಲ್ ಅಥವಾ ಸಂಸ್ಥೆಯ ಸದಸ್ಯರನ್ನು ಭೇಟಿಯಾದಾಗ ವಂದನೆಯ ಜೊತೆ ಜೊತೆಗೆ ಎಡಗೈ ಚಾಚಿ ಹಸ್ತಲಾಘವ ಮಾಡುವರು. ಈ ಹಸ್ತಲಾಘವ ನಮ್ಮ ಚಳವಳಿಯ ವಿಶಿಷ್ಟ ಮತ್ತು ಗುಪ್ತ ಸಂಕೇತ.



ವಂದಿಸುವಾಗ ಚುರುಕಾಗಿ ಚಿತ್ರದಲ್ಲಿ ತೋರಿಸಿದಂತೆ ಸಾವಧಾನ್‌ನಲ್ಲಿ ನಿಂತು ಎರಡು ಬಲಗೈ ಬೆರಳು ಚಾಚಿ ಕಿರುಬೆರಳಿನ ಮೇಲೆ ಹೆಬ್ಬೆರಳಿಟ್ಟು ಹಸ್ತಮುದ್ರೆ ಮಾಡಿ ಕೈ ಭುಜಮಟ್ಟಕ್ಕೆ ಎತ್ತಿ ಬೆರಳನ್ನು ಬಲ ಹುಬ್ಬಿನ ಮೇಲೆ ಹಣೆಗೆ ತಾಗಿಸಬೇಕು.

ಬಿ.ಪಿ.ಯವರು ದಕ್ಷಿಣ ಆಫ್ರಿಕಾದ ಗುಡ್ಡಗಾಡಿನ "ಅಶಾಂತಿ" ಜನರನ್ನು ಗೆದ್ದಾಗ ಅವರ ನಾಯಕ "ಪ್ರೆಂಫೆ" ಬಿ.ಪಿ.ಯವರಿಗೆ ಎಡಗೈ ಹಸ್ತಲಾಘವ ನೀಡಿದರು. ಬಿ.ಪಿ.ಯವರು ಆಶ್ಚರ್ಯದಿಂದ ಹೀಗೇಕೆ? ಎಂದಾಗ ಇದು "ವೀರರಲ್ಲಿ ವೀರರಿಗೆ ನೀಡುವ ಸನ್ಮಾನ". ಇದು ನಂಬಿಕೆಯ ಸ್ನೇಹಹಸ್ತ ಎಂದರು. ಈ ಸಂಕೇತವನ್ನು ಬಿ.ಪಿ.ಯವರು ಬಾಲಕರಿಗೆ ಸ್ಕೌಟಿಂಗ್ ಚಳವಳಿ ಸ್ಥಾಪಿಸಿದಾಗ ಸಂಸ್ಥೆಯ ಗುಪ್ತ ಸಂಕೇತವಾಗಿ ನೀಡಿದರು.

ಪ್ರತಿಜ್ಞೆ, ನಿಯಮ, ಧ್ಯೇಯ, ವಂದನೆ, ಎಡಗೈಹಸ್ತ ಲಾಘವ ಈ ಐದು ಅಂಶಗಳು ವಿಶ್ವದಾದ್ಯಂತ ಎಲ್ಲಾ ಬುಲ್‌ಬುಲ್‌ಗಳು ಬಳಸುವುದರಿಂದ ಇದನ್ನು ವಿಶ್ವ ಅಥವಾ ಅಂತರರಾಷ್ಟ್ರೀಯ ಸಾಮಾನ್ಯ ಬಂಧಕ (Common bonds) ಎನ್ನುತ್ತೇವೆ.

### 6. ಪ್ರಾರ್ಥನೆ

ದೇಹದ ಸ್ವಚ್ಛತೆಗೆ ಸ್ನಾನವಿದ್ದಂತೆ, ಮನಸ್ಸಿನ ಸ್ವಚ್ಛತೆಗೆ ಪ್ರಾರ್ಥನೆ ಅವಶ್ಯಕ. ಪ್ರಾರ್ಥನೆ ಎಂದರೆ ದೇವರೊಡನೆ ಮಾತು. ನೀನು ದೇವರಿಗೆ ಸ್ನೇಹಿತೆಯಾಗಿ ನಿನ್ನ ಸಂತೋಷ, ನಿನ್ನ ದುಃಖ, ನಿನ್ನ ಭಯಗಳನ್ನು, ದೇವರಲ್ಲಿ ಭಕ್ತಿಪೂರ್ವಕವಾಗಿ ನಿವೇದಿಸು. ಸಹಾಯವನ್ನು ಕೇಳು ದೇವರು ಸಂತೋಷದಿಂದ ನಿನಗೆ ಸಹಾಯ ಮಾಡುತ್ತಾನೆ. ದೇವರು ನಿನಗೆ ನೀಡಿರುವ ಎಲ್ಲಾ ಸುಂದರವಾದ ವಸ್ತುಗಳಿಗೆ ವಂದನೆ ಹೇಳು. ನಿಮ್ಮ ತಾಯಿತಂದೆ ಕಲಿಸಿದ ರೀತಿಯಲ್ಲಿ ಪ್ರತಿದಿನ ದೇವರಿಗೆ ವಂದಿಸುವುದು ನಿನ್ನ ಕರ್ತವ್ಯ.

## 7. ಮನೆಯಲ್ಲಿ ಸತ್ಕಾರ್ಯ

ಸತ್ಕಾರ್ಯ / ಒಳ್ಳೆಯ ಕಾರ್ಯ ಎಂದರೆ ದಯೆ ತೋರುವುದು, ಸಹಾಯ ಮಾಡುವುದು. ಆದರೆ ಹೀಗೆ ಮಾಡಿದ್ದಕ್ಕೆ ಪ್ರತಿಫಲಾಪೇಕ್ಷೆ ನಿರೀಕ್ಷಿಸಬಾರದು. ಇದು ನಿಸ್ವಾರ್ಥ, ಸ್ವಯಂಪ್ರೇರಣೆಯಿಂದ ಮಾಡುವ ಸೇವೆ.

ಪ್ರತಿದಿನ ಇತರರಿಗೆ, ಮನೆಯವರಿಗೆ, ಸ್ನೇಹಿತರಿಗೆ, ಅಪರಿಚಿತರಿಗೆ, ಪ್ರಾಣಿಗಳಿಗೆ ಅವಶ್ಯವಿದ್ದಾಗ ಮಾಡುವ ಸಹಾಯ ಅಥವಾ ಸೇವೆ. ಇವರು ಹೀಗೆ ಮಾಡುವುದರಿಂದ ಬೆಳೆದು ದೊಡ್ಡವರಾದಾಗ ಸೇವಾ ಮನೋಭಾವ ಬೆಳೆದು ಉಪಯುಕ್ತ ನಾಗರೀಕರಾಗುತ್ತಾರೆ.

ನೀವು ಮಾಡಬಹುದಾದ ಪುಟ್ಟ ಸಹಾಯಗಳು

- ತಾಯಿಗೆ ಸಹಾಯ –ಪಾತ್ರೆ ತೊಳೆಯುವುದು, ಕಸಗುಡಿಸುವುದು, ಒರೆಸುವುದು, ಸಾಮಾನುಗಳನ್ನು ಅಚ್ಚುಕಟ್ಟಾಗಿ ಜೋಡಿಸುವುದು.
- ಒಂದೆರಡು ಲೋಟ ಟೀ/ಕಾಫಿ ತಯಾರಿಸುವುದು.
- ತಂಗಿ–ತಮ್ಮಂದಿರಿಗೆ ಓದಲು ಸಹಾಯ. ಶಾಲೆಗೆ ಹೋಗಲು ಸಿದ್ಧಮಾಡುವುದು.
- ಅಂಗಡಿಗೆ ಹೋಗಿ ಸಾಮಾನು ತರುವುದು.
- ತಂದೆಗೆ ಸಹಾಯ ಮಾಡುವುದು. ಮನೆಯಲ್ಲಿರುವ ಹಿರಿಯರಿಗೆ ಸಹಾಯ ಮಾಡುವುದು.
- ಬೇಜಾರುಪಟ್ಟುಕೊಂಡವರನ್ನು ನಗಿಸುವುದು/ಸಮಾಧಾನಪಡಿಸುವುದು.
- **ಇತರರಿಗೆ ಸಹಾಯ:** ವೃದ್ಧಾಶ್ರಮಗಳಿಗೆ ಭೇಟಿ ನೀಡಿ ವೃದ್ಧರಿಗೆ ಸಹಾಯ ಮಾಡುವುದು. ಅವರೊಡನೆ ಮಾತನಾಡಿ, ಆಟವಾಡಿ, ಹಾಡಿ ಅವರನ್ನು ಸಂತೋಷಪಡಿಸುವುದು.
- ದಡ್ಡ ಮಕ್ಕಳಿಗೆ ಓದಲು, ಬರೆಯಲು, ಲೆಕ್ಕಮಾಡಲು ಸಹಾಯ ಮಾಡುವುದು.
- ಬಡಮಕ್ಕಳಿಗೆ ಪುಸ್ತಕ, ಪೆನ್ಸಿಲ್ ಕೊಟ್ಟು ಸಹಾಯ ಮಾಡುವುದು.
- ವಯಸ್ಸಾದವರಿಗೆ ರಸ್ತೆ ದಾಟಲು, ಅವರ ಬಳಿ ಭಾರವಾದ ಸಾಮಾನಿದ್ದರೆ ತೆಗೆದುಕೊಂಡು ಹೋಗಲು ಸಹಾಯ ಮಾಡುವುದು.

- ಅಂಗವಿಕಲರಿಗೆ ನೀವು ಕುಳಿತಿದ್ದರೆ ಸ್ಥಳ ಬಿಟ್ಟುಕೊಡುವುದು.
- ಶಾಲೆಯ ತರಗತಿ ಹಾಗೂ ಆವರಣವನ್ನು ಸ್ವಚ್ಛವಾಗಿಟ್ಟುಕೊಳ್ಳುವುದು.
- ಮನೆಯಲ್ಲಿ, ಶಾಲೆಯಲ್ಲಿ ತೋಟದ ಸಸ್ಯಗಳಿಗೆ ನೀರು ಹಾಕುವುದು.

ಹೀಗೆ ಹತ್ತು ಹಲವು ಕೈಲಾದ ಪುಟ್ಟ ಸಹಾಯ ಮಾಡುವ ಅಭ್ಯಾಸ ಮಾಡಿಕೊಂಡರೆ ನೀವು ಉತ್ತಮರಾಗಿ ಬೆಳೆಯುವಿರಿ. ಬುಲ್‌ಬುಲ್ ಪ್ರವೇಶಿ ಮೇಲಿನ ಎಲ್ಲಾ ಅವಶ್ಯಕತೆಗಳನ್ನು ಪೂರೈಸಿದರೆ ತನ್ನ ಹಿಂಡಿನನಾಯಕಿಗೆ (ಬುಲ್‌ಬುಲ್ ಶಿಕ್ಷಕಿ/Flock Leader) ಬುಲ್‌ಬುಲ್ ವೃಕ್ಷವನ್ನು ಮುಟ್ಟಿ ಭಾಷೆಯನ್ನು (ಪ್ರತಿಜ್ಞೆ) ನೀಡುವಳು. ಭಾಷೆ ನೀಡಿ, ನೀಲಿ ಪಟ್ಟಿಯ ಮೇಲೆ ಭಾರತ್ ಸ್ಕೌಟ್-ಗೈಡ್ ಚಿಹ್ನೆ ಇರುವ ಪದಕವನ್ನು ನಾಯಕಿಯಿಂದ ಪಡೆದು ಅಧಿಕೃತವಾಗಿ ಬುಲ್‌ಬುಲ್ ಆಗುವಳು. ಹೀಗೆ ಬುಲ್‌ಬುಲ್ ಆಗಿ ಸ್ಕೌಟ್-ಗೈಡ್ ಚಳವಳಿಯ ಸದಸ್ಯಳಾಗುವಳು.

ಬುಲ್‌ಬುಲ್ ನಾಯಕಿ/ ಶಿಕ್ಷಕಿಯರು ಸಹ ಈ ವಿಷಯಗಳಲ್ಲಿ ತರಬೇತಿ ಪಡೆದ ಮೇಲೆ ಅವರ ನಾಯಕಿಯರಿಗೆ ಭಾರತ್ ಸ್ಕೌಟ್-ಗೈಡ್ ಧ್ವಜದ ಅಡಿಯಲ್ಲಿ ಪ್ರತಿಜ್ಞೆ ನೀಡಿ ಹಸಿರು ಪಟ್ಟಿಯ ಮೇಲೆ ಭಾರತ್ ಸ್ಕೌಟ್-ಗೈಡ್ ಲಾಂಛನವಿರುವ ಸದಸ್ಯತ್ವ ಪದಕ ಪಡೆದು ಭಾರತ್ ಸ್ಕೌಟ್-ಗೈಡ್ ಚಳವಳಿಯ ಸದಸ್ಯರಾಗುವರು.

## 8. ದೀಕ್ಷಾ ಸಮಾರಂಭ

ಬುಲ್‌ಬುಲ್‌ಗಳು ಬುಲ್‌ಬುಲ್ ವೃಕ್ಷದ ಸುತ್ತಲೂ ವೃತ್ತ ಮಾಡುವರು. ನಾಯಕಿ ವೃಕ್ಷದ ಪಕ್ಕದಲ್ಲಿರುವರು. ಸಹಾಯಕ ನಾಯಕಿ ಇದ್ದರೆ ನಾಯಕಿಯ ಎಡಭಾಗದಲ್ಲಿ ನಿಲ್ಲುವರು. ಕಂಠವಸ್ತ್ರ (Scarf) ಮತ್ತು ಪದಕ ವೃಕ್ಷದ ಮೇಲೆ ಹಾಕಿಡಲಾಗುವುದು. ನಾಯಕಿ ಪ್ರತಿಜ್ಞೆ ಸ್ವೀಕರಿಸಿದ ನಂತರ ಸಹನಾಯಕಿ ಪದಕ ಮತ್ತು ಕಂಠವಸ್ತ್ರವನ್ನು ನಾಯಕಿಗೆ ನೀಡುವಳು. ನಾಯಕಿ ಹಿಂಡಿನ ನಾಯಕಿ, ಸಹನಾಯಕಿ, ಪ್ರವೇಶಿ ಹಾಗು ಹಿಂಡು ಸಮವಸ್ತ್ರದಲ್ಲಿರಬೇಕು. ಪ್ರವೇಶಿ ಷಟ್ಕನಾಯಕಿಯೊಡನೆ ಹಾರುತ್ತಾ ಬರುವಳು. ಷಟ್ಕನಾಯಕಿಗೆ ಎದುರಾಗಿ



ಸಾವಧಾನ್‌ನಲ್ಲಿ ನಿಂತು ಹೀಗೆ ಹೇಳುವಳು. "ಮಾಮ್/ಮಿಸ್ .................................. ಇವಳು ಪ್ರವೇಶದ ಪರೀಕ್ಷೆಗಳಲ್ಲಿ ಉತ್ತೀರ್ಣಳಾಗಿದ್ದಾಳೆ. ಇವಳು ನಮ್ಮ ಹಿಂಡಿನ ಸದಸ್ಯಳಾಗ ಬಯಸುತ್ತಾಳೆ.".

**ಹಿಂಡಿನ ನಾಯಕಿ (ಹಿ.ನಾ.)** : ಬುಲ್‌ಬುಲ್ ನಿಯಮಗಳೇನು?

**ಪ್ರವೇಶಿ :** ಬುಲ್‌ಬುಲ್ ಹಿರಿಯರಿಗೆ ಸಂಪೂರ್ಣ ವಿಧೇಯಳು. ಬುಲ್‌ಬುಲ್ ಸ್ವಚ್ಛವಾಗಿರುವಳು ವಿನಯಶೀಲಳಾಗಿರುವಳು.

**ಹಿ.ನಾ. :** ನಿನಗೆ ಬುಲ್‌ಬುಲ್ ಪ್ರತಿಜ್ಞೆ ತಿಳಿದಿದೆಯೆ?

**ಪ್ರವೇಶಿ :** ಹೌದು ಮ್ಯಾಮ್/ ಮಿಸ್.

**ಹಿ.ನಾ. :** ಒಮ್ಮೆ ಪ್ರತಿಜ್ಞೆ ಮಾಡಿದರೆ ಸರ್ವದಾ ಪಾಲಿಸಬೇಕು. ಮತ್ತು ಅದನ್ನು ಅನುಸರಿಸಲು ಸದಾ ಪ್ರಯತ್ನಿಸಬೇಕೆಂದು ನಿನಗೆ ತಿಳಿದಿದೆಯೆ?

**ಪ್ರವೇಶಿ :** ತಿಳಿದಿದೆ ಮ್ಯಾಮ್/ಮಿಸ್.

**ಹಿ.ನಾ. :** ಹಾಗಿದ್ದರೆ ಬುಲ್‌ಬುಲ್ ವೃಕ್ಷ ಮುಟ್ಟಿ ಪ್ರತಿಜ್ಞೆ ಮಾಡು.

ಪ್ರವೇಶಿ ಒಂದು ಹೆಜ್ಜೆ ಮುಂದೆ ಬಂದು ಎಡಗೈಯಿಂದ ಬುಲ್‌ಬುಲ್ ವೃಕ್ಷವನ್ನು ಮುಟ್ಟುತ್ತಾ ಬಲಗೈಯಿಂದ ವಂದಿಸುತ್ತಾ (Salute) ನಾಯಕಿ ಉಚ್ಚರಿಸಿದ ಪ್ರತಿಜ್ಞೆಯನ್ನು ಪುನರುಚ್ಚರಿಸುವಳು.

ನಂತರ ಹಿಂಡಿನ ನಾಯಕಿ ಅಭಿನಂದಿಸುತ್ತಾ ಎಡತೋಳಿನ ಮೇಲೆ ಮಧ್ಯಭಾಗದಲ್ಲಿ ಸದಸ್ಯತ್ವ ಪದಕವನ್ನು ಹಾಕುತ್ತಾ ಹೀಗೆ ಹೇಳುವರು.

"ಈಗ ನೀನು .................... ಹಿಂಡಿನ ಬುಲ್‌ಬುಲ್ ಆಗಿರುವೆ. ನೀನು ಈ ಹಿಂಡಿನಲ್ಲಿ ಉತ್ತಮವಾದುದನ್ನು ಮಾಡುತ್ತಿ ಎಂದು ನಂಬಿದ್ದೇನೆ" ಎಂದು ಅಭಿನಂದಿಸುವರು.

ನೂತನ ಬುಲ್‌ಬುಲ್ ಮತ್ತು ಹಿಂಡಿನ ನಾಯಕಿ ಪರಸ್ಪರ ವಂದಿಸಿ ಹಸ್ತಲಾಘವ ಮಾಡುವರು. ಹಿಂಡಿನ ನಾಯಕಿ ಅವಳನ್ನು ಹಿಂಡಿಗೆ ಮುಖ ಮಾಡಿಸಿ ನಿಲ್ಲಿಸುವರು. ಹಿಂಡು ವಂದಿಸುವ ಮೂಲಕ ನೂತನ ಬುಲ್‌ಬುಲ್‌ಳನ್ನು ಸ್ವಾಗತಿಸುವುದು. ನಂತರ ಷಟ್ಕನಾಯಕಿ ಹಾರುತ್ತಾ ಹೋಗಿ ಹಿಂಡನ್ನು ಸೇರುವಳು. ಪರಸ್ಪರರು ಅಭಿನಂದಿಸುತ್ತಾ ಹಸ್ತಲಾಘವ ಮಾಡುವರು. ದೀಕ್ಷಾ ಸಮಾರಂಭದ ನಂತರ ಒಂದು ಒಳ್ಳೆಯ ನೀತಿಕಥೆಯನ್ನು ಹೇಳಬೇಕು. ನಂತರ ಸಮಾರಂಭವನ್ನು ಸಿಹಿ ಹಂಚಿ ಮುಕ್ತಾಯಗೊಳಿಸಬೇಕು.

ಪ್ರವೇಶಿ ಅಧಿಕೃತವಾಗಿ ಪ್ರತಿಜ್ಞೆ ಮಾಡಿ ಸಮವಸ್ತ್ರ ಮತ್ತು ಸದಸ್ಯತ್ವ ಪದಕವನ್ನು ಧರಿಸಿ ಬುಲ್‌ಬುಲ್ ಆಗುವಳು. ಈ ಪದಕವನ್ನು ರಾಜ್ಯ ಸಂಸ್ಥೆ ಸರಬರಾಜು ಮಾಡುವುದು. ಹಿಂಡಿನ ನಾಯಕಿ ಈ ಪದಕವನ್ನು ಸ್ಥಳೀಯ ಅಥವಾ ಜಿಲ್ಲಾ ಸಂಸ್ಥೆಯಿಂದ ಪಡೆಯಬೇಕು.



## 12. ಕೋಮಲ ಪಂಖ




1. ಸ್ವಂತ ವಸ್ತ್ರಗಳನ್ನು ಹೇಗೆ ಇಟ್ಟುಕೊಳ್ಳಬೇಕೆಂಬುದನ್ನು ತಿಳಿಯುವುದು.

**(i) ಬಟ್ಟೆಗಳು**

- ಬಟ್ಟೆ ಮಡಚಿಡುವುದನ್ನು ಕಲಿಯುವುದು.
- ಹತ್ತಿ, ಉಣ್ಣೆ ಮತ್ತು ನೈಲಾನ್ ಬಟ್ಟೆಗಳನ್ನು ಹೇಗೆ ಒಗೆಯಬೇಕು ಎಂಬುದನ್ನು ಕಲಿಯುವುದು.
- ಬಣ್ಣದ ಬಟ್ಟೆಗಳನ್ನು, ಬಿಳಿಯ ಬಟ್ಟೆಗಳನ್ನು ಪ್ರತ್ಯೇಕವಾಗಿ ಒಗೆಯುವುದು.

**ಬಟ್ಟೆಯ ರಕ್ಷಣೆ:** ಸ್ವಚ್ಛವಾಗಿಡುವುದು, ಮಡಚಿಡುವುದು, ಕಪಾಟಿನಲ್ಲಿಡುವುದು, ನುಸಿಗುಳಿಗೆ ಹಾಕಿಡುವುದು, ಹರಿದ ಬಟ್ಟೆ ಹೊಲೆಯುವುದು, ಗುಂಡಿ ಕಿತ್ತುಹೋದರೆ, ಹುಕ್ ಕಿತ್ತು ಹೋದರೆ ಹಾಕುವುದು. ಕಾಜ ಮಾಡುವುದು, 'ರಂಧ್ರ' ಮತ್ತು ಗುಂಡಿ ಹೊಲೆಯುವುದು.

ಸೂಜಿಗೆ ಎರಡು ಮಡಿಕೆ ದಾರ ಪೋಣಿಸಿ ಗುಂಡಿ ಇಟ್ಟು ಎರಡು ರಂಧ್ರಗಳಿಗೂ ದಾರವನ್ನು ಮೂರುಬಾರಿ ಹಿಂದಿನಿಂದ ಮುಂದಕ್ಕೆ ಹಾಯಿಸಿ ಬಿಗಿ ಮಾಡಿ ನಂತರ ಹಿಂದಕ್ಕೆ ತೆಗೆದುಕೊಂಡು ಗಂಟುಹಾಕಿ. ಬಟ್ಟೆ ಒಗೆದ ನಂತರ ಗುಂಡಿ ಇದೆಯೇ ಪರೀಕ್ಷಿಸಿ. ಇಲ್ಲದಿದ್ದರೆ ತಕ್ಷಣವೇ ಹಾಕಿ.

**(ii) ಪಾದರಕ್ಷೆ :**

- ಸಮವಸ್ತ್ರದಲ್ಲಿ ತಿಳಿಸಿರುವಂತೆ ಕರಿಬಣ್ಣದ ಪಾದರಕ್ಷೆಯನ್ನು ಧರಿಸಬೇಕು.
- ಅದರ ಅಳತೆ ಸರಿಯಾಗಿರಬೇಕು.
- ಅದನ್ನು ಸ್ವಚ್ಛಮಾಡಿ ಚೆನ್ನಾಗಿ ಹೊಳಪುಗೊಳಿಸಬೇಕು.
- ಅದರ ದಾರ ಸರಿಯಾಗಿ ಕಟ್ಟಿರಬೇಕು.
- ಬಿಳಿ ಕಾಲುಚೀಲ ಧರಿಸಿ ಪಾದರಕ್ಷೆ ಹಾಕಬೇಕು. ಕಾಲುಚೀಲವನ್ನು ಸ್ವಚ್ಛವಾಗಿಟ್ಟುಕೊಳ್ಳಬೇಕು.

2. ಊಟಕ್ಕೆ ಮುನ್ನ ಪ್ರಾರ್ಥಿಸಿ: ದೇವರು ನಿತ್ಯವೂ ನಮಗೆ ಆಹಾರ ಕೊಡುತ್ತಾನೆ. ಆಹಾರವನ್ನು ಕೊಡುವ ದೇವರಿಗೆ ವಂದಿಸಿ ಊಟ ಮಾಡಿ.

ಭೋಜನ ಸ್ತೋತ್ರಗಳು:

**God has created a new day**
**Silver & Green & Gold**
**Live that thy sunshine may find**
**Worthy Its gifts to hold.**

ಓಂ ಸಹನಾ ಬವತು ಸಹನೌ ಭುನಕ್ತೊ
ಸಹ ವೀರ್ಯಂ ಕರವಾವ ಹೈ
ತೇಜಸ್ವಿನಾ ವಧೀತ ಮಸ್ತೋ
ಮಾ ವಿದ್ ವಿಷಾವ ಹೈ
ಓಂ ಶಾಂತಿಃ, ಶಾಂತಿಃ ಶಾಂತಿಃ

ನಹಿ ಯಹ ತೇರಾ ನಹಿಯಹ ಮೇರಾ
ಈಶ್ವರ ಕಾಹಿ ಯೆ ರಾಜ್ಯ ಹೈ
ಈಶ್ವರ ಕಾ ಫಲ ಈಶ್ವರ ಕಾ ಜಲ
ಈಶ್ವರ ಕಾಹಿ ಯೆ ರಾಜ್ಯ ಹೈ

**For Health & strength & daily food**
**We praise thy name, oh Lord!**

**Thank you for the world so sweet**
**Thank you for the food we eat**
**Thank you for the Birds that sing**
**Thank you god for everything.**

3. ಸತ್ಕಾರ್ಯ ಮನೆಯಲ್ಲಿ ಶಾಲೆಯಲ್ಲಿ

ಈಗಾಗಲೇ ಸತ್ಕಾರ್ಯದ ಬಗ್ಗೆ ತಿಳಿದಿದ್ದೀರಿ. ಇದನ್ನು ಸಂಸ್ಥೆಯ ಸದಸ್ಯರಾಗಿ, ಬುಲ್‌ಬುಲ್‌ಗಳಾಗಿ ಮಾಡಬೇಕಾದುದು ನಮ್ಮ ಕರ್ತವ್ಯ ಹಾಗು ಪ್ರತಿಜ್ಞೆಯ ಒಂದು ಅಂಶ ಇತರರಿಗೆ ಕೈಲಾದ ಸಹಾಯ ಮಾಡುತ್ತೇನೆ. ಮನೆಯಲ್ಲಿ ರಸ್ತೆಯಲ್ಲಿ ಮಾಡಬಹುದಾದ, ಸಹಾಯ ತಿಳಿಸಲಾಗಿದೆ. ಇದಲ್ಲದೆ ಸಂದರ್ಭಕ್ಕೆ ತಕ್ಕಂತೆ ಯಾವ ಸಹಾಯವನ್ನಾದರೂ ಮಾಡಬಹುದು. ಬುಲ್‌ಬುಲ್‌ಳನ್ನು ಉತ್ತಮ ಪ್ರಜೆಯಾಗಿ, ಮಾನವಳಾಗಿ ಮಾಡಲು ಇದು ಮುಖ್ಯ. ಸಹಾಯ ಮಾಡುವ ಅಭ್ಯಾಸ ಮಾಡಿಸಬೇಕು.

### ಶಾಲೆಯಲ್ಲಿ ಸಹಾಯ

- ತರಗತಿ, ಕಪ್ಪುಹಲಗೆ, ಆಸನ ಮೇಜುಗಳನ್ನು ಸ್ವಚ್ಛವಾಗಿಡುವುದು.
- ಎಲ್ಲವನ್ನೂ ಅಂದವಾಗಿ ಜೋಡಿಸುವುದು.
- ಕಾಗದದ ಚೂರು, ಕಸಕಡ್ಡಿ, ಕಲ್ಲುಗಳನ್ನು ತೆಗೆದು ಆಟದ ಬಯಲನ್ನು ಸ್ವಚ್ಛವಾಗಿಡುವುದು.
- ಅನಾರೋಗ್ಯ ಅಥವಾ ತೊಂದರೆಗಳಿಂದ ಶಾಲೆಗೆ ಬರಲಾಗದ ಸ್ನೇಹಿತೆಗೆ ಟಿಪ್ಪಣಿ ಪುಸ್ತಕ ಕೊಡು.
- ನೀರು ಕುಡಿಯುವಾಗ, ಶೌಚಾಲಯಕ್ಕೆ ಹೋಗುವಾಗ ವಿದ್ಯಾರ್ಥಿಗಳನ್ನು ಸರತಿ ಸಾಲು ಮಾಡಿ ನಿಲ್ಲಿಸುವುದು.
- ಗಾಯವಾದಾಗ, ಬಿದ್ದಾಗ, ಆರೋಗ್ಯ ಕೆಟ್ಟಾಗ ಅವರಿಗೆ ಪ್ರಥಮ ಚಿಕಿತ್ಸೆ ಮಾಡುವ ಮೂಲಕ/ಹಿರಿಯರಿಗೆ ಹೇಳುವ ಮೂಲಕ ಅಥವಾ ವೈದ್ಯರ ಬಳಿ ಕರೆದುಕೊಂಡು ಹೋಗುವ ಮೂಲಕ ಸಹಾಯ ಮಾಡುವುದು.

ಇದಕ್ಕೆಲ್ಲಾ ಬೇಕಾದ ತರಬೇತಿ ಹಿಂಡಿನ ನಾಯಕಿ ನೀಡಬೇಕು.

### 4. ವ್ಯಾಯಾಮ

ಸೊಂಟ ಬಾಗಿಸಿ ಪಾದದ ಹೆಬ್ಬೆರಳು ಮುಟ್ಟಿಸುವುದು.

"ಆರೋಗ್ಯವಂತ ದೇಹದಲ್ಲಿ ಆರೋಗ್ಯಕರ ಮನಸ್ಸು" ಬುಲ್‌ಬುಲ್ ವಯೋಮಾನ ಅಭ್ಯಾಸ ರೂಪಿಸುವ ವಯಸ್ಸು. ಹಸನಾದ ಗಾಳಿ, ಪುಷ್ಟಿಕರ ಆಹಾರದ ಜೊತೆಗೆ ವ್ಯಾಯಾಮವು ಆರೋಗ್ಯಕ್ಕೆ ಮುಖ್ಯ. ಬಲಶಾಲಿಯಾಗಲು ಚೆನ್ನಾಗಿ ಬೆಳೆಯಲು ದೇಹದ ಪ್ರತಿ ಅಂಗಕ್ಕೂ ವ್ಯಾಯಾಮ ಅಗತ್ಯ.

ಅ) ಮಂಡಿ ಬಗ್ಗಿಸುವುದು: ಹೆಬ್ಬೆರಳು ಮುಟ್ಟುವುದು.

ಆ) ಪಾದ ಅಗಲಿಸಿ ನಿಂತು ನಿಧಾನವಾಗಿ ಬಾಗುತ್ತಾ ಮಂಡಿ ಮಡಚದಂತೆ ನೇರವಾಗಿಟ್ಟುಕೊಂಡು ಕೈಗಳನ್ನು ನೇರವಾಗಿ ಪಾದಗಳ ಹೆಬ್ಬೆರಳಿಗೆ ಮುಟ್ಟಿಸಬೇಕು. ನಿಧಾನವಾಗಿ ಹೆಬ್ಬೆರಳಿನಿಂದ ಕೈಗಳನ್ನು ಮೇಲೆತ್ತುತ್ತಾ ನೇರವಾಗಿ ನಿಲ್ಲಬೇಕು. ಇದನ್ನು ಪುನರಾವರ್ತಿಸಿ ಹಲವು ಬಾರಿ ಮಾಡುವುದರಿಂದ ಮಾಂಸ, ನರಗಳು ಸದೃಢವಾಗುತ್ತವೆ.

## ಆರೋಗ್ಯಕರ ಅಭ್ಯಾಸಗಳು

ಪೌಷ್ಟಿಕ ಆಹಾರ ಸೇವನೆ, ಹಸನಾದ ಗಾಳಿಯ ಉಸಿರಾಟ, ದೇಹದ ಒಳಗಿನ ಸ್ವಚ್ಛತೆ, ಹೊರಗಿನ ಸ್ವಚ್ಛತೆ, ಬಗ್ಗಿ, ನಿಲ್ಲಿ, ಓಡಿ, ಆಡಿ. (**ಆರೋಗ್ಯ In ರೋಗ Out.**)

## ಕೈ ಮತ್ತು ಪಾದಗಳ ಸ್ವಚ್ಛತೆ

ಕೈಕಾಲು ಆಡಲು ಓಡಲು ಬಳಸುವುದರಿಂದ ಬೇಗ ಕೊಳೆಯಾಗುತ್ತದೆ. ಸೋಪು, ಬ್ರಷ್ ಮತ್ತು ನೀರಿನಿಂದ ಕೈಕಾಲು ಸ್ವಚ್ಛ ಮಾಡಿಕೊಂಡು ಟವಲ್‌ನಿಂದ ಒರೆಸಿಕೊಳ್ಳಬೇಕು.

ಗಾಳಿಯಲ್ಲಿನ ಅಣುಜೀವಿಗಳು ಧೂಳು ಕೊಳೆಗಳು ಉಗುರಿನಲ್ಲಿ ಸೇರಿಕೊಳ್ಳುತ್ತದೆ. ಹೀಗೆ ಕೊಳೆ ಸೇರದಂತೆ ಇಟ್ಟುಕೊಳ್ಳಲು ಉಗುರನ್ನು ಕತ್ತರಿಸಬೇಕು. ಕೈತೊಳೆಯುವಾಗ ಉಗುರನ್ನು ತೊಳೆಯಬೇಕು. ಉಗುರು ಸ್ವಚ್ಛಮಾಡದೆ ಇದ್ದರೆ, ಊಟ, ತಿಂಡಿ ಕೈಯಿಂದ ತಿಂದರೆ ಕೊಳೆ ಹೊಟ್ಟೆಯನ್ನು ಸೇರುತ್ತದೆ. ಇದರಿಂದ ಅನಾರೋಗ್ಯ ಉಂಟಾಗುತ್ತದೆ.

ಕಾಲಿನ ಉಗುರನ್ನು ಕತ್ತರಿಸಬೇಕು. ಕಾಲಿನ ಬೆರಳುಗಳು ಉಗುರು ಷೂಸಿನ ಒತ್ತಡಕ್ಕೆ ಸಿಕ್ಕಿ ಅಡ್ಡಲಾಗಿ ಬೆಳೆದು ಬೆರಳಿನ ಮಾಂಸಖಂಡದ ಒಳಗೆ ಹೋಗುವುದುಂಟು. ಇದರಿಂದ ವಿಪರೀತ ತೊಂದರೆಯಾಗುತ್ತದೆ.

ಉಗುರು ಕತ್ತರಿಸಲು ಉಗುರು ಕತ್ತರಿ (Nail Cutter) ಬಳಸಿ ಉಗುರಿನ ಅಂಚನ್ನು ದುಂಡಾಗಿ ಕತ್ತರಿಸಿ ಅಂಚು ಉಜ್ಜಿ ನಯಮಾಡಿ.

ಉಗುರು ಕಚ್ಚುವ ಅಭ್ಯಾಸ ಕೆಟ್ಟದ್ದು. ಇದರಿಂದ ಉಗುರುಗಳು ಅಂದಗೆಡುತ್ತವೆ. ಉಗುರಿನಲ್ಲಿರುವ ಕೊಳೆ ಹೊಟ್ಟೆ ಸೇರಿ ರೋಗ ಉಂಟುಮಾಡುತ್ತದೆ.

## ಹಲ್ಲುಗಳು

ಹಲ್ಲುಗಳಿಂದ ಆಹಾರ ಚೆನ್ನಾಗಿ ಅಗಿಯದಿದ್ದರೆ ಆಹಾರ ಜೀರ್ಣವಾಗುವುದಿಲ್ಲ, ಜೀರ್ಣವಾಗದೆ ರಕ್ತಕ್ಕೆ ಸೇರುವುದಿಲ್ಲ. ರಕ್ತಕ್ಕೆ ಸೇರದೆ ಶಕ್ತಿ ಉತ್ಪಾದನೆಯಾಗುವುದಿಲ್ಲ; ಶಕ್ತಿ ಉತ್ಪತ್ತಿಯಾಗದೆ ಕೆಲಸ ಮಾಡಲು ಮತ್ತು ಆರೋಗ್ಯವಾಗಿರಲು ಸಾಧ್ಯವಿಲ್ಲ.

ಹಲ್ಲನ್ನು ಪ್ರತಿದಿನ ಹಲ್ಲುಪುಡಿ ಅಥವಾ ಪೇಸ್ಟ್ ಮತ್ತು ಬ್ರಷ್‌ನಿಂದ ಸ್ವಚ್ಛಗೊಳಿಸಬೇಕು. ಆಹಾರ ತೆಗೆದುಕೊಂಡ ನಂತರ ನೀರನ್ನು ಬಾಯಿಯಲ್ಲಿ ಹಾಕಿಕೊಂಡು ಗುಳುಗುಳಿಸ (Gargle) ಬೇಕು. ಇಲ್ಲವಾದರೆ ಅಣುಜೀವಿಗಳು, ಆಹಾರದ ನುಣುಪು ತುಣುಕುಗಳು ಹಲ್ಲಿನ ಸಂದಿಯಲ್ಲಿ ಸೇರಿ ಹಲ್ಲು ಹುಳುಕಾಗುತ್ತದೆ. ಹಲ್ಲು ಬೀಳುತ್ತದೆ. ಹಲ್ಲು ನೋವು ಬರುತ್ತದೆ. ಕೆಲವೊಮ್ಮೆ ಕೀವು ಸುರಿದು ವಾಸನೆ ಬರುತ್ತದೆ. ದಂತ ಕ್ಷಯ ಉಂಟಾಗುತ್ತದೆ. ಆಹಾರ ಅಗೆಯಲು ಸಾಧ್ಯವಾಗುವುದಿಲ್ಲ. ಅಜೀರ್ಣ ಸಮಸ್ಯೆ ಉಂಟಾಗುತ್ತದೆ.

### 4. ಶುದ್ಧಗಾಳಿ ಮತ್ತು ಆಳವಾದ ಉಸಿರಾಟ

ಶುದ್ಧಗಾಳಿ ರಕ್ತವನ್ನು ಶುದ್ಧಗೊಳಿಸುತ್ತದೆ. ಮೂಗಿನಿಂದಲೆ ಉಸಿರಾಡಬೇಕು. ಆಳವಾಗಿ ದೀರ್ಘವಾಗಿ ಉಸಿರಾಡುವುದರಿಂದ ದೇಹಕ್ಕೆ ಸಾಕಷ್ಟು ಆಮ್ಲಜನಕ ದೊರೆಯುತ್ತದೆ. ದೇಹದಿಂದ ಇಂಗಾಲದ ಡೈ ಆಕ್ಸೈಡ್ ಪೂರ್ಣವಾಗಿ ಹೊರಗೆ ಹೋಗುತ್ತದೆ. ಇದರಿಂದ ಆರೋಗ್ಯ ವೃದ್ಧಿಸುತ್ತದೆ.

### 5. ಕೆಳಗಿನ ಯಾವುದಾದರೂ ಎರಡು ದೈಹಿಕ ಚಟುವಟಿಕೆಗಳನ್ನು ಅಭ್ಯಾಸ ಮಾಡುವುದು

ಅ) ಸಮತೋಲನ ಮಾಡುತ್ತಾ ನಡೆಯುವುದು

ಆ) 3 ಮೀಟರ್ ಅಂತರದಿಂದ ಟೆನ್ನಿಸ್ ಚೆಂಡು ಎಸೆದಾಡುವುದು.

ಇ) ಕುಂಟಾಟ ಆಡುವುದು.

ಈ) ಹಗ್ಗದ ಆಟ ಆಡು.

1) **ಸಮತೋಲನ ನಡಿಗೆ:** ಯಾವುದಾದರು ಒಂದು ಕೆ.ಜಿ. ವಸ್ತುವನ್ನು ತಲೆಮೇಲೆ ಹೊತ್ತು ಸಮತೋಲನ ಮಾಡುತ್ತಾ 10 ಮೀಟರ್ ನಡೆಯಿರಿ.

2) **ಟೆನ್ನಿಸ್ ಚೆಂಡಿನ ಎಸೆತ:** ಕೈಬೆರಳುಗಳಲ್ಲಿ ಹಿಡಿದು ಭುಜಬಲ ಬಳಿಸಿ ಓಡುತ್ತಾ ವೇಗವಾಗಿ ಕೈಬೀಸಿ ಚೆಂಡು ಎಸೆಯುವುದು. ಎದುರಾಳಿಗಳು ಚೆಂಡಿನ ಚಲನೆ ನೋಡುತ್ತಾ ಗುರಿ ಅನುಸರಿಸಿ ಹಿಡಿಯಬೇಕು. ಕ್ರಿಕೆಟ್ ಬೌಲಿಂಗ್‌ನಂತೆ ಮಾಡಿ.

3) **ಕುಂಟಾಟ:** ಒಂದೇ ಕಾಲಿನಲ್ಲಿ ಕುಂಟುತ್ತಾ ಕುಪ್ಪಳಿಸುತ್ತಾ ಜೂಟಾಟ. ಕಾಲು ಬದಲಾಯಿಸಬಹುದು. ಹಿಡಿಯಲು ಬೆನ್ನಟ್ಟಬಹುದು. ಇಲ್ಲದಿದ್ದಾಗ ಎರಡು ಕಾಲು ಬಿಟ್ಟು ನಿಲ್ಲಬಹುದು.

4) ಜಿಗಿಯುವುದು

5) ಮೊಣಕಾಲು ಬಗ್ಗಿಸುವಿಕೆ ಮತ್ತು ಹೆಬ್ಬೆರಳು ಮುಟ್ಟು ವ್ಯಾಯಾಮವನ್ನು ನಿರಂತರವಾಗಿ ಮಾಡುತ್ತಾ ಒಳ್ಳೆಯ ಆರೋಗ್ಯದ ಅಭ್ಯಾಸಗಳನ್ನು ಮಾಡುವುದು. (Making Exercises Regularly Perform Good Health Practices by Knee Bending and Thumb)

i. ಹಗ್ಗ ಮುಂದಕ್ಕೆ ಹಾಕಿಕೊಂಡು 10 ಬಾರಿ ಜಿಗಿಯುವುದು.

ii. ಹಗ್ಗ ಆಡುತ್ತಾ ಬಯಲಿನಲ್ಲಿ ಓಡಿ.

iii. ಪಾದವನ್ನು ಬದಲಾಯಿಸುತ್ತಾ 10 ಬಾರಿ ಹಾರಿ.

iv. ಹಾಡಿಗೆ ತಕ್ಕನಾಗಿ ಹಗ್ಗ ಆಡಿ.

v. ವೈವಿಧ್ಯಮಯವಾಗಿ ಆಡಿ.

vi. ಕಣ್ಣುಮುಚ್ಚಿ ಹಗ್ಗ ಆಡಿ.

vii. ಒಂಟಿಕಾಲಿನಲ್ಲಿ ಹಗ್ಗ ಆಡಿ

viii. ಹಿಮ್ಮುಖ ಹಗ್ಗ ಆಡಿ.



- ಹಗ್ಗ ಭುಜದಿಂದ ಪಾದದವರೆಗಿನ ಉದ್ದದ ಎರಡರಷ್ಟಿರಬೇಕು.
- ದೇಹವನ್ನು ಸರಿಯಾದ ಭಂಗಿಯಲ್ಲಿ ಬಳಸಿ.
- ಹಗುರವಾಗಿ ಸರಿಯಾದ ಭಂಗಿಯಲ್ಲಿ ಬಳಸಿ.
- *Make a collection of five different deases of awareness path and label them in a Scrap Book.*

**6. 5 ವಿಧದ ಎಲೆಗಳನ್ನು ಮತ್ತು ಹೂವುಗಳನ್ನು ಸಂಗ್ರಹಿಸಿ ಅವುಗಳ ಹೆಸರನ್ನು ಹೇಳಿ.**

ಹಿಂಡಿನ ನಾಯಕಿ ಬುಲ್‌ಬುಲ್‌ಗಳಿಗೆ ಪ್ರಕೃತಿಯನ್ನು ಪರಿಚಯಿಸಿ ಅಧ್ಯಯನ ಮಾಡಲು ಪ್ರೋತ್ಸಾಹಿಸಬೇಕು. ಅವರು ಗಿಡ, ಮರ, ಎಲೆ, ಹೂವುಗಳನ್ನು ಗುರುತಿಸಿ ಹೆಸರನ್ನು ಹೇಳಲು ಸಮರ್ಥರಾಗಬೇಕು. ಅವುಗಳನ್ನು ಸಂಗ್ರಹಿಸಿ ಹಾಳೆಗಳಲ್ಲಿ ಅಂಟಿಸಿ ಹೆಸರು ಬರೆದು ಸಂರಕ್ಷಿಸಬೇಕು.

## 7. ಗಡಿಯಾರ ನೋಡಿ ಸಮಯ ಹೇಳಿ




ಬುಲ್‌ಬುಲ್‌ಗಳಿಗೆ ಸಮಯ ಪ್ರಜ್ಞೆ ಕಲಿಸಬೇಕು. ಸಮಯವನ್ನು ಗಡಿಯಾರದಲ್ಲಿ ನೋಡುವುದನ್ನು ಕಲಿಸಬೇಕು. ಗಂಟೆ ನಿಮಿಷಗಳ ಲೆಕ್ಕಾಚಾರ ತಿಳಿದಿರಬೇಕು. ರಟ್ಟಿನಲ್ಲಿ ಮುಳ್ಳುಗಳನ್ನು ಜೋಡಿಸಿ ಗಡಿಯಾರ ಮಾಡಿಸಿ ಇದರ ಸಹಾಯದಿಂದ ಸಮಯ ನೋಡುವುದನ್ನು ಅಭ್ಯಾಸ ಮಾಡಬೇಕು. ಸಮಯದ ಮಹತ್ವವನ್ನು ಅರಿಯಬೇಕು.

## 8. ಸಮಗಂಟು (Reef knot) ಮತ್ತು ಕೊಟ್ಟಿಗೆಗಂಟು ಹಾಕಿ ಬಳಸುವುದು



ಸಮಾನ ದಪ್ಪದ ಹಗ್ಗಗಳನ್ನು ಜೋಡಿಸಲು ಗಾಯದ ಪಟ್ಟಿಕಟ್ಟುವಾಗ, ಅದರ ತುದಿಗಳನ್ನು ಸಮಗಂಟನ್ನು ಜೋಡಿಸಬೇಕು. ಪಾರ್ಸಲ್ ಕಟ್ಟಲು ಈ ಗಂಟು ಉಪಯೋಗಿಸುವರು. ಸಾಮಾನಿನ ಗಂಟು ಕಟ್ಟಲು ಉಪಯೋಗಿಸುವರು. ಈ ಗಂಟನ್ನು ಸುಲಭವಾಗಿ ಬಿಚ್ಚಬಹುದು. ಆದರೆ ಗಂಟು ಜಾರುವುದಿಲ್ಲ.

### ಕೊಟ್ಟಿಗೆಗಂಟು (Clove hitch)

ಗೂಟಕ್ಕೆ ಹಗ್ಗ ಕಟ್ಟಲು ಉಪಯೋಗಿಸಲಾಗುವುದು. ಇದು ಭದ್ರಗಂಟು. ಇದನ್ನು ಹೆಚ್ಚು ಭದ್ರ ಮಾಡಲು ಅರೆಗಂಟು ಹಾಕಬೇಕು. ಇದನ್ನು ಧೋಬಿಗಳು ಗೂಟಕ್ಕೆ ಹಗ್ಗ ಕಟ್ಟಲು, ಹೂಕಟ್ಟಲು, ಆಟದ ಬಲೆ ಕಂಬಕ್ಕೆ ಕಟ್ಟಲು ಉಪಯೋಗಿಸುತ್ತಾರೆ. ಧ್ವಜ ತುದಿ ಕಡ್ಡಿಗೆ ಕಟ್ಟಲು ಬಳಸಲಾಗುವುದು.



**ಯಾವುದಾದರೂ ಮೂರನ್ನು ಪ್ರದರ್ಶಿಸಿ**

**ಅ) ಸೈಕಲ್ ಸವಾರಿ ಮಾಡಿ**

**ಆ) ವಿಳಾಸ ಬರೆದು ಲಕೋಟೆ ಮೇಲೆ ಅಂಚೆಚೀಟಿ (Stamp) ಅಂಟಿಸಿ. ಅಂಚೆಪೆಟ್ಟಿಗೆಗೆ ಹಾಕಿ.**

ಇ) **ರಾಷ್ಟ್ರಧ್ವಜ ಹಾರಿಸಿದಾಗ ರಾಷ್ಟ್ರಗೀತೆ ಹಾಡಿ:** ರಾಷ್ಟ್ರಧ್ವಜ ನಮ್ಮದು. ಅದನ್ನು ಗೌರವಿಸಬೇಕು. ಅದರ ಬಗ್ಗೆ ಕಾಳಜಿ ಇರಬೇಕು. ರಾಷ್ಟ್ರಧ್ವಜ ಹಾರಿಸುವಾಗ ಸಾವಧಾನ್‌ನಲ್ಲಿರಬೇಕು, ಹಾರಿಸಿದಾಗ ವಂದನೆ ಸಲ್ಲಿಸಬೇಕು. ರಾಷ್ಟ್ರಗೀತೆ ಹಾಡುವಾಗಲೂ ಎಲ್ಲರೂ ಸಾವಧಾನ್‌ನಲ್ಲಿ ನಿಂತು ಗೌರವ ಸಲ್ಲಿಸಬೇಕು.

ಈ) **ದೀಕ್ಷೆ ಪಡೆದಾಗ ನೀಡಿದ ಸದಸ್ಯತ್ವ ಪದಕದ ಅರ್ಥ ತಿಳಿಯಿರಿ:** ಸದಸ್ಯತ್ವ ಪದಕ ಹಿರಿಯ ಕಿರಿಯರೆಲ್ಲರಿಗೂ ಭಾರತ್ ಸ್ಕೌಟ್–ಗೈಡ್ ಸದಸ್ಯತ್ವ ನೀಡುತ್ತದೆ. ಇದನ್ನು ಧರಿಸಿದವರಿಗೆ ಈ ಚಳವಳಿಯಲ್ಲಿ ಭಾಗವಹಿಸಲು ಪರವಾನಗಿ ದೊರೆಯುತ್ತದೆ. ಪದಕದ ಫ್ಲೂ–ರ–ಡೆಲಿಸ್ ನಾವು ವಿಶ್ವ ಸ್ಕೌಟ್ ಸಂಸ್ಥೆಯ ಸದಸ್ಯರೆಂದು, ಅದಲ್ಲಿರುವ ತ್ರಿದಳ ನಾವು ವಿಶ್ವಗೈಡ್ ಸಂಸ್ಥೆಯ ಸದಸ್ಯರೆಂದು, ತಿಳಿಸುತ್ತದೆ. ಮಧ್ಯದ ಚಕ್ರ ನಾವು ಭಾರತದ ಸ್ಕೌಟ್–ಗೈಡ್ ಸದಸ್ಯರೆಂದು ತಿಳಿಸುತ್ತದೆ. ಬಂಧಕ ಭಾರತದಲ್ಲಿ ಸ್ಕೌಟ್ ಮತ್ತು ಗೈಡ್ ಸಂಸ್ಥೆ ವಿಲೀನಗೊಂಡು ಒಟ್ಟಾಗಿ ಕೆಲಸ ಮಾಡುತ್ತದೆ ಎಂದು ಸೂಚಿಸುತ್ತದೆ. ಇದನ್ನು ಪಡೆದ ಮೇಲೆ ಪ್ರಗತಿಪರ ಬುಲ್‌ಬುಲ್‌ಗಳು ತರಬೇತಿಗಳನ್ನು ಹೊಂದಬಹುದು.

**ಮೂಲ ಸಂಪರ್ಕ ಉಪಯೋಗಿಸಿ Use Basic Communication**

ಎ) **ದೂರವಾಣಿ ಬಳಕೆ:** ದೂರವಾಣಿ ಬಹಳ ಉಪಯುಕ್ತ ದೂರದಲ್ಲಿರುವವರನ್ನು ನೇರವಾಗಿ ಸಂಪರ್ಕಿಸಬಹುದು. ಕ್ಷಣಾರ್ಧದಲ್ಲಿ ವಿಷಯ ತಿಳಿಸಬಹುದು, ತಿಳಿಯಬಹುದು. ಆದರೆ ದೂರವಾಣಿಗಿಂತಲೂ ಉಪಯುಕ್ತವಾದ ಸರಳವಾದ ಸಾಧನ ಮೊಬೈಲ್ ಸಂಪರ್ಕ ಮಾಧ್ಯಮಗಳಲ್ಲಿ ಕ್ರಾಂತಿ ಉಂಟುಮಾಡಿದೆ. ದೂರವಾಣಿಯಾಗಲಿ/ಮೊಬೈಲ್ ಆಗಲಿ ಎಷ್ಟು ಬೇಕೊ ಅಷ್ಟು ಮಾತ್ರ ಬಳಸಬೇಕು. ಯಾವುದೇ ಅತಿಯಾದರೂ ಹಾನಿಯಾಗುತ್ತದೆ.

ದೂರವಾಣಿ :

- ಸಂಖ್ಯೆಯನ್ನು ಒತ್ತುವ ಮುನ್ನ ದೂರವಾಣಿ ಧ್ವನಿ ಕೇಳಿ (Ringtone).
- ಸಂಖ್ಯೆ ನಿಖರವಾಗಿ ತಿಳಿದಿರಬೇಕು. ಒಂದು ಪುಸ್ತಕ ಇಟ್ಟು ಸಂಖ್ಯೆ ಮತ್ತು ಅದರ ಯಜಮಾನರ ಹೆಸರು ಬರೆದುಕೊಳ್ಳಿ.
- ನಂಬರನ್ನು ಮೃದುವಾಗಿ ಸ್ತುತಿಸಿ, ನಂಬರ್ ಒತ್ತುವ ವ್ಯವಸ್ಥೆ ಇದ್ದರೆ ಮೃದುವಾಗಿ ಒತ್ತಿ. Hello ಎಂಬ ಧ್ವನಿ ಕೇಳುತ್ತಿದ್ದಂತೆ ನೀವು ಹಲೊ ಎಂದು ಹೆಸರು ಹೇಳಿ ನಂತರ ಸಂಭಾಷಣೆ ಶುರುಮಾಡಿ.
- ಸಂಭಾಷಣೆ ಮುಗಿದ ಮೇಲೆ ಗ್ರಾಹಕವನ್ನು ಸರಿಯಾಗಿಡಿ.
- ಅಗತ್ಯ ಸೇವೆಗಳ ಟೆಲಿಫೋನ್ ಸಂಖ್ಯೆ ಸಂಗ್ರಹಿಸಿ.
- ಅಗತ್ಯ ಸೇವೆಗಳಿಗೆ ಕರೆ ಮಾಡಿದಾಗ ನಿಮ್ಮ ಟೆಲಿಫೋನ್ ಸಂಖ್ಯೆ ಹಾಗು ವಿಳಾಸ ಕೊಡಿ.

ಮೊಬೈಲ್ ಬಳಕೆ

- ಮೊಬೈಲ್‌ನಲ್ಲಿ ಅಗತ್ಯವಾದಾಗ ಅವಶ್ಯಕವಾದಷ್ಟೆ ಮಾತನಾಡಬೇಕು.
- ಮೊಬೈಲ್‌ನಲ್ಲಿ ಹೆಚ್ಚುಕಾಲ ಮಾತನಾಡಿದರೆ ಕಿವಿಗಳಿಗೆ ಕ್ರಮೇಣ ಹಾನಿಯಾಗುತ್ತದೆ.
- ತುಂಬಾ ಜೋರಾಗಿ ಮಾತನಾಡಬಾರದು.
- ರಸ್ತೆಯಲ್ಲಿ ಮೊಬೈಲ್‌ನಲ್ಲಿ ಮಾತನಾಡುತ್ತಾ ನಡೆಯಬಾರದು.
- ವಾಹನ ಚಾಲನೆ ಮಾಡುತ್ತಾ ಮೊಬೈಲ್‌ನಲ್ಲಿ ಮಾತನಾಡಬಾರದು.
- ತರಗತಿ/ಸಭೆಗಳಲ್ಲಿ ಮೊಬೈಲನ್ನು ಸ್ಥಗಿತ/ನಿಶ್ಯಬ್ದಗೊಳಿಸಬೇಕು.
- ನಿಮ್ಮ ವಯಸ್ಸಿನಲ್ಲಿ ಮೊಬೈಲ್ ಹೆಚ್ಚು ಬಳಸಬಾರದು.
- ವ್ಯಾಪಾರಿ ಕರೆಗಳಿಗೆ ಉತ್ತರಿಸಬಾರದು. ಅಪರಿಚಿತ ಕರೆಗಳಿಗೂ ಉತ್ತರಿಸಬಾರದು.
- ಮರ ಹತ್ತಿ ಹಗ್ಗದ ಸಹಾಯದಿಂದ ಮೇಲೆ ಹತ್ತಿ.

10. ವಿಳಾಸ ಮತ್ತು ತಂದೆ-ತಾಯಿಯರ ಹೆಸರನ್ನು ಸರಿಯಾಗಿ ತಿಳಿದುಕೊಂಡು ಹೇಳುವಳು / ಮೊಬೈಲ್ ನಂಬರ್ ತಿಳಿದಿರುವಳು (Be able to tell the Name, Address and Telephone / Mobile Number of their Parents)

ಬುಲ್‌ಬುಲ್ (National Anthem) ಪ್ರಾರ್ಥನಾಗೀತೆ ಮತ್ತು ಧ್ವಜಗೀತೆ

ರಾಷ್ಟ್ರಗೀತೆ (National Anthem):

ಜನಗಣಮನ ಅಧಿನಾಯಕ ಜಯಹೇ
ಭಾರತ ಭಾಗ್ಯವಿಧಾತ
ಪಂಜಾಬ ಸಿಂಧು ಗುಜರಾತ ಮರಾಠ
ದ್ರಾವಿಡ ಉತ್ಕಲ ವಂಗ
ವಿಂಧ್ಯ ಹಿಮಾಚಲ ಯಮುನಾ ಗಂಗಾ
ಉಚ್ಛಲ ಜಲಧಿತರಂಗಾ
ತವ ಶುಭ ನಾಮೇ ಜಾಗೇ
ತವಶುಭ ಆಶಿಶ ಮಾಘೇ
ಗಾಹೇ ತವಜಯ ಗಾಥಾ
ಜನಗಣ ಮಂಗಲದಾಯಕ ಜಯಹೇ
ಭಾರತ ಭಾಗ್ಯವಿಧಾತ
ಜಯ ಹೇ, ಜಯಹೇ ಜಯಹೇ ।
ಜಯ ಜಯ ಜಯ ಜಯಹೇ ॥

– ರಬೀಂದ್ರನಾಥ ಠಾಕೂರ್

ಧ್ವಜಗೀತೆ

ಭಾರತ್ ಸ್ಕೌಟ್-ಗೈಡ್ ಝಂಡಾ ಊಂಚಾ ಸದಾರಹೇಗಾ
ಊಂಚಾ ಸದಾ ರಹೇಗಾ ಝಂಡ ಊಂಚಾ ಸದಾರಹೇಗಾ
ನಿಲಾರಂಗ ಗಗನ ಸಾ ವಿಸ್ತೃತ ಭ್ರಾತೃಭಾವ ಫೈಲಾತ
ತ್ರಿದಲ ಕಮಲ ನಿತ ತೀನ ಪ್ರತಿಜ್ಞಾ ವೋಂಕಿಯಾದ ದಿಲಾತ
ಔರ್ ಚಕ್ರ ಕಹೆತಾ ಹೈ ಪ್ರತಿಪಲ ಆಗೆ ಕದಂ ಬಡೇಗಾ
ಊಂಚಾ ಸದಾರಹೇಗಾ ಝಂಡಾ ಊಂಚಾ ಸದಾರಹೇಗ
ಭಾರತ್ ಸ್ಕೌಟ್-ಗೈಡ್ ಝಂಡಾ ಊಂಚಾ ಸದಾ ರಹೇಗಾ।

ಪುಟ್ಟ ಪುಸ್ತಕದಲ್ಲಿ ಈ ವಿವರಗಳನ್ನು ಬರೆದಿಡಿ. ಟೆಲಿಫೋನ್ ಹಾಗೂ ಮೊಬೈಲ್ ಸಂಖ್ಯೆಯನ್ನು ಬರೆಯಲಿ. ಈ ಮಾಹಿತಿ ದಾರಿ ತಪ್ಪಿದಾಗ ಮನೆಸೇರಲು ಹಾಗೂ ತುರ್ತುಪರಿಸ್ಥಿತಿಯಲ್ಲಿ ಅಗತ್ಯ.

**12. ಬುಲ್‌ಬುಲ್ ಆಗಿ ಕನಿಷ್ಠ 8 ಹಿಂಡಿನ ಸಭೆಯಲ್ಲಿ ನಿರಂತರವಾಗಿ ಭಾಗವಹಿಸಬೇಕು.**

ಪ್ರತಿದಿನದ ಹಾಜರಾತಿ ನಿಮ್ಮ ಶಿಸ್ತನ್ನು ತೋರಿಸುವುದಲ್ಲದೆ ಇತರರಿಗೂ ನಿಮ್ಮ ಶಿಸ್ತು ಉದಾಹರಣೆಯಾಗುತ್ತದೆ. ನಿಮ್ಮ ಸ್ನೇಹಿತರು ತಂದೆ-ತಾಯಿಯರು ಶಿಕ್ಷಕರ ದೃಷ್ಟಿಯಲ್ಲಿ ನೀವು ನಂಬಿಕೆಗೆ ಯೋಗ್ಯರಾಗುತ್ತೀರಿ, ಗೌರವಿಸಲ್ಪಡುತ್ತೀರಿ.

**ಟಿಪ್ಪಣಿ:** ಈ ಎಲ್ಲಾ ಪರೀಕ್ಷೆಗಳನ್ನು ಪ್ರವೇಶದ ಬುಲ್‌ಬುಲ್ ಮಾಡಿ ಉತ್ತೀರ್ಣಳಾದರೆ ಕೋಮಲ ಪಂಖ ಪದಕವನ್ನು ಹಿಂಡಿನ ನಾಯಕಿಯ ಶಿಫಾರಸ್ಸಿನ ಮೇಲೆ ಸ್ಥಳೀಯ/ಜಿಲ್ಲಾ ಸಂಸ್ಥೆ ನೀಡುವುದು. ಕೋಮಲ ಪಂಖ ಪದಕ ಒಂದು ನೀಲಿ ಬಟ್ಟೆಯ ಪಟ್ಟಿ, ಈ ಹಿನ್ನೆಲೆಯ ಮೇಲೆ ಎರಡು ಹಸಿರು ರೆಕ್ಕೆ ಮಧ್ಯೆ ಭಾರತ್ ಸ್ಕೌಟ್-ಗೈಡ್ ಲಾಂಛನವನ್ನು ರೆಕ್ಕೆಗಳ ಮೇಲೆ 'K' 'P' ಎಂಬ ಅಕ್ಷರಗಳನ್ನು ಹೊಂದಿರುತ್ತದೆ. ಇದನ್ನು ಎಡ ಜೇಬಿನ ಮೇಲ್ಭಾಗದಲ್ಲಿ ಧರಿಸಬೇಕು.



# 13. ರಜತ ಪಂಖದ ಪರೀಕ್ಷೆ




1. **ನಿಮ್ಮ ಗ್ರಾಮ/ಬಡಾವಣೆ/ನಗರಗಳಲ್ಲಿರುವ ಕೆಲವು ಮುಖ್ಯ ವ್ಯಕ್ತಿಗಳನ್ನು ತಂದೆ-ತಾಯಿ ಯರಿಂದ ತಿಳಿಯುವುದು. ತಿಳಿದು ಅವರು ಮಾಡುವ ಕೆಲಸದ ಬಗ್ಗೆ ನಾಯಕಿಯವರಿಗೆ ಹೇಳುವುದು.**

ನಾವು ವಾಸಿಸುವ ಸ್ಥಳ ಮತ್ತು ಜನರ ಪರಿಚಯ ನಮಗೆ ಇರಬೇಕು. ಸಾಮಾನ್ಯ ಜ್ಞಾನವನ್ನು ಬೆಳೆಸಿಕೊಳ್ಳಬೇಕು. ನೀವು ಸಹಾಯ ಮಾಡಲು ಪ್ರತಿಜ್ಞೆ ಮಾಡಿದ್ದೀರಿ. ಗ್ರಾಮಪಂಚಾಯಿತಿ ಅಧ್ಯಕ್ಷರು, ಗ್ರಾಮಲೆಕ್ಕಿಗರು, ಸರಪಂಚರು ಇವರಲ್ಲದೆ ಗ್ರಾಮಸೇವಕರು, ವೈದ್ಯರು, ಶಿಕ್ಷಕರು, ಅಂಚೆ ಅಧಿಕಾರಿಗಳು, ಪೋಲಿಸ್ ಮುಂತಾದವರು ಗ್ರಾಮದ ಮುಖ್ಯ ಜನರು. ಪ್ರತಿ ನಗರ, ಬಡಾವಣೆಗಳಲ್ಲೂ ಇವರು ಇರುತ್ತಾರೆ. ಅವರ ಜವಾಬ್ದಾರಿ ಹಾಗೂ ಸಾರ್ವಜನಿಕ ಸೇವೆ ಬಗ್ಗೆ ಮಾಹಿತಿ ಸಂಗ್ರಹಿಸಿ. ನಿಮ್ಮ ನಾಯಕಿಗೆ ವಿವರಿಸಿ. ಇದರಿಂದ ನಾಯಕಿ ಮತ್ತು ಬುಲ್‌ಬುಲ್‌ಗಳಿಗೆ ಅವಶ್ಯವಿದ್ದಾಗ ಅವರ ಸಹಾಯ ಪಡೆಯಲು ಸಾಧ್ಯವಾಗುತ್ತದೆ.

2. **ನಿಮ್ಮ ಅಪ್ಪ ಅಮ್ಮನಿಂದ ನಿಮ್ಮ ಮನೆಯಲ್ಲಿರುವ ಒಡೆಯುವ, ಚೂಪಾದ ಮತ್ತು ಬೆಲೆ ಬಾಳುವ ವಸ್ತುಗಳ ಸುರಕ್ಷತೆ ಬಗ್ಗೆ ತಿಳಿ.**

ಗಾಜಿನ ಸಾಮಾನು, ಕನ್ನಡಿ, ಶೀಸೆಗಳು ಮುಂತಾದವುಗಳನ್ನು ಬಳಸುವ ವಿಧಾನ ತಿಳಿದು ಬಳಸಿ.

ಬ್ಲೇಡ್, ಚಾಕು, ಕತ್ತಿ, ಕತ್ತರಿ, ಮೊಳೆ, ಸೂಜಿ, ಪಿನ್ನು ಇವುಗಳನ್ನು ಸುರಕ್ಷಿತವಾಗಿ ಬಳಸುವ ವಿಧಾನ ತಿಳಿಯಿರಿ.

ಟಿ.ವಿ., ರೇಡಿಯೊ, ಟ್ರಾನ್ಸಿಸ್ಟರ್, ಟೇಪ್‌ರೆಕಾರ್ಡರ್, ಕ್ಯಾಮರ, ಮಿಕ್ಸಿ, ವಿದ್ಯುತ್ ಒಲೆ, ಗ್ಯಾಸ್ ಒಲೆ, ಹಣ, ಆಭರಣ ಇತ್ಯಾದಿಗಳನ್ನು ಬಳಸುವ ವಿಧಾನ ಮತ್ತು ಕಾಪಾಡುವ ವಿಧಾನ ತಿಳಿದಿರಬೇಕು. ಬಳಸಿದ ನಂತರ ವಸ್ತುಗಳನ್ನು ಇಟ್ಟಲ್ಲೇ ಇಡುವ ಅಭ್ಯಾಸ ಮಾಡಬೇಕು.

ವಿದ್ಯುತ್ ಉಪಕರಣ, ಬೆಂಕಿ ಮತ್ತು ನೀರಿನೊಡನೆ ಆಡುವ ಅಪಾಯ ಮನವರಿಕೆ ಮಾಡಬೇಕು. ಕಿಟಕಿ ಬಾಗಿಲುಗಳನ್ನು ಸ್ವಚ್ಛವಾಗಿಡಬೇಕು. ಅವುಗಳ ಮೃದು ಚಲನೆಗಾಗಿ ಕೀಲುಗಳಿಗೆ ಎಣ್ಣೆ ಹಾಕಬೇಕು. ಪೀಠೋಪಕರಣಗಳನ್ನು ಸ್ವಚ್ಛಮಾಡಿ ಅಂದವಾಗಿ ಜೋಡಿಸಬೇಕು.

**3. ತ್ಯಾಜ್ಯ ವಸ್ತುಗಳಿಂದ ಅಲಂಕಾರಿಕ ವಸ್ತು ತಯಾರಿಕೆ ಅಥವಾ ಜೇಡಿಮಣ್ಣಿನ ಮಾದರಿ ತಯಾರಿಸಿ**

a) ತೆಂಗಿನ ಚಿಪ್ಪು ಮತ್ತು ನಾರು, ಕಡಲೆಕಾಯಿ ಸಿಪ್ಪೆ, (Nut Shell) ಮೊಟ್ಟೆ ಚಿಪ್ಪು, ದಾರ, ಉಣ್ಣೆ, ಬಟ್ಟೆ ಚೂರು, ಬಳೆಚೂರು, ಡಬ್ಬ, ಮುಚ್ಚಳ, ಕಾಗದ, ಪ್ಲಾಸ್ಟಿಕ್ ಹೀಗೆ ಅಮ್ಮ ಬಿಸಾಡಬೇಕೆಂದ ವಸ್ತುಗಳನ್ನು ಸಂಗ್ರಹಿಸಿ. ಅದರಿಂದ ಅಂದವಾದ ವಸ್ತುಗಳನ್ನು ತಯಾರಿಸಿ.

ಹೀಗೆ ಮಾಡುವುದರಿಂದ ಸೃಜನಶೀಲತೆ, ಕರಕೌಶಲ, ಕಸ ರಸ ಮಾಡುವ ಜಾಣ್ಮೆ ಬೆಳೆಯುತ್ತದೆ. ಸಮಯದ ಸದುಪಯೋಗವಾಗುತ್ತದೆ. ಇದನ್ನು ಪ್ರೋತ್ಸಾಹಿಸುವುದರಿಂದ ತಯಾರಿಸಿದ ವಸ್ತುವಿನಿಂದ ಶಾಲೆ, ಮನೆ ಅಲಂಕರಿಸಬಹುದು. ಉಡುಗೊರೆ ಕೊಡಬಹುದು. ಚೆನ್ನಾಗಿದ್ದರೆ ಮಾರಬಹುದು. ಆಟಿಕೆಗಳನ್ನು ಮಾಡಿ ಮಕ್ಕಳಿಗೆ ಕೊಡಬಹುದು.

**b) ಜೇಡಿಮಣ್ಣಿನ ಮಾದರಿ**

ಆಟಿಕೆಯನ್ನು ತಯಾರಿಸಲು ಮಣ್ಣೆ, ಬಟ್ಟೆ, ನೀರು, ಕೈಬಿರಸು, ಚಾಕು, ಚಕ್ಕೆ ಹೀಗೆ ಹಲವು ಮನೆಯಲ್ಲಿ ದೊರೆಯುವ ಉಪಕರಣಬೇಕು.

(i) ಜೇಡಿಮಣ್ಣು ಜಿಗುಟಾಗಿರುತ್ತದೆ. ಇದನ್ನು ಚೆನ್ನಾಗಿ ಮೃದುವಾಗಿ ಚಪಾತಿ ಹಿಟ್ಟಿನಂತೆ ಕಲಸಿಕೊಳ್ಳಿ.

(ii) ನಿಮಗೆ ಬೇಕಾದಷ್ಟು ಉಂಡೆ ಮಾಡಿಕೊಳ್ಳಿ. ಅದನ್ನು ಕೈಯಲ್ಲಿಟ್ಟುಕೊಳ್ಳಿ.

(iii) ಬೆರಳುಗಳಿಂದ ಆಕಾರ ಮಾಡುತ್ತಾ ಅಂಗೈಯಿಂದ ನಯ ಮಾಡುತ್ತಾ ಹೋಗಿ. ಮಣ್ಣು ಒಣಗಿದರೆ ಆಕಾರ ಬರುವುದಿಲ್ಲ. ಆಗಾಗ್ಗೆ ಕೈನೀರು ಮಾಡಿಕೊಂಡು ಸವರಿ.

(iv) ಆಕಾರ ಪೂರ್ಣವಾದ ನಂತರ ನೆಲ/ಮೇಜಿನ ಮೇಲೆ ಇಡಿ. ಬೀಳದಂತೆ ತಳ ಚಪ್ಪಟೆ ಮಾಡಿ.

(v) ಬಿಸಿಲಿನಲ್ಲಿ ಒಣಗಲು ಬಿಡಿ. ಒಣಗಿದ ನಂತರ ಬಣ್ಣ ಹಚ್ಚಿ. ಇದರಿಂದ ಮಡಿಕೆ, ಕುಡಿಕೆ, ಹೂದಾನಿ, ಗೊಂಬೆ ಪ್ರಾಣಿಗಳ ಆಕೃತಿ ಮಾಡಿ ಆನಂದಿಸಿ.

**ಅಮುಕಿ, ಚುಚ್ಚಿ, ಉರುಳಿಸಿ, ಎಳೆಯಿರಿ, ತಟ್ಟಿ, ತಿರುಚಿ. ನಯಮಾಡಿ, ಆಕೃತಿ ತಯ್ಯಾರ್.**

4. **ನಿಮ್ಮ ತೋಟ/ಸುತ್ತಲಿರುವ ಮರಗಳನ್ನು ಅವುಗಳ ಹೂವುಗಳನ್ನು ವೀಕ್ಷಿಸಿ. 8 ಎಲೆ 8 ಹೂವು ಸಂಗ್ರಹಿಸಿ. ದಿನಚರಿ ಪುಸ್ತಕದಲ್ಲಿ ಆಂಟಿಸಿ (Paste Chart of Log Book)**

ಗಿಡಮರಗಳನ್ನು ವೀಕ್ಷಿಸಲು ಪ್ರೋತ್ಸಾಹಿಸಿ. ಅವುಗಳ ಹೆಸರು ಮತ್ತು ವಿಚಾರ ತಿಳಿಯಲಿ. ಅಂದವಾದ ಚಾರ್ಟ್ ಮಾಡಲಿ. ಇದನ್ನು ಶಾಲೆಯ ಆವರಣದಲ್ಲಿ ಪ್ರದರ್ಶಿಸಲಿ. ಬುಲ್‌ಬುಲ್ ಮಕ್ಕಳಲ್ಲದೆ ಶಾಲೆಯ ಎಲ್ಲಾ ಮಕ್ಕಳಿಗೂ ಉಪಯುಕ್ತವಾಗುತ್ತದೆ. ಬುಲ್‌ಬುಲ್ ಮಕ್ಕಳು ಸಸ್ಯ ಸ್ನೇಹಿಗಳಾಗುತ್ತಾರೆ. ಎಲೆ ಹೂವು ಅಂಟಿಸಿ.

5. **ಸಂಗ್ರಹಿಸಿದ ವಸ್ತುಗಳನ್ನು ಸಂರಕ್ಷಿಸಿ**

ಸಂಗ್ರಹ ಬುಲ್‌ಬುಲ್ ವಯೋಮಾನದ ಮನೋಧರ್ಮಕ್ಕೆ ಅನುಗುಣವಾಗಿ ಬೇಕಾದ್ದು, ಬೇಡದ್ದು ಎಲ್ಲವನ್ನೂ ಸಂಗ್ರಹಿಸುತ್ತಾರೆ. ಇವುಗಳನ್ನು ಕಾಪಾಡುವುದು ಹೇಗೆ?

1. ಸಂಗ್ರಹಿಸಿದ ವಸ್ತುಗಳಲ್ಲಿ ಬೇಕಾದದ್ದು, ಕಾಪಾಡಬಹುದಾದ್ದನ್ನು ಆಯ್ಕೆ ಮಾಡಿ.
2. ಅವುಗಳನ್ನು ಸುರಕ್ಷಿತವಾಗಿಡಲು ಬೇಕಾದ ರಟ್ಟು, ಪಾರದರ್ಶಕ ಶೀಸೆ, ಆಲ್ಬಂ, ಪ್ಲಾಸ್ಟಿಕ್ ಚೀಲಗಳು, ಪಾರದರ್ಶಕ ಡಬ್ಬಿ ಹೀಗೆ ಹತ್ತು ಹಲವು ಸೂಕ್ತ ವಸ್ತುಗಳನ್ನು ಜೋಡಿಸಿಕೊಳ್ಳಿ.
3. ಇವುಗಳನ್ನು ರಟ್ಟು ಅಥವಾ ಹಾಳೆಗೆ ಜೋಡಿಸಲು ಬೇಕಾದ ಅಂಟು, ಸೂಜಿದಾರ, ಅಂಟುಪಟ್ಟಿ ಇತ್ಯಾದಿ ಅವಶ್ಯಕ.
4. ಅವಶ್ಯವಿದ್ದಲ್ಲಿ ವಸ್ತುಗಳ ಹೆಸರು ಬರೆಯುವುದು.
5. ಇವುಗಳನ್ನು ಶಾಲೆ ಅಥವಾ ಮನೆಯ ಕಪಾಟಿನಲ್ಲಿಡುವುದು. ಆಗಾಗ್ಗೆ ತೆಗೆದು ವರೆಸಿ ಸ್ವಚ್ಛಮಾಡಿ ಇಡುವುದು.
6. ಎಲೆ/ಹೂವನ್ನು/ದಳಗಳನ್ನು ಕಿತ್ತು ಬಟ್ಟೆ ಅಥವಾ ಹೀರು ಕಾಗದ/ವರ್ತಮಾನ ಪತ್ರಿಕೆ (News Paper) ಮಡಿಕೆಗಳ ಮಧ್ಯ ಇಟ್ಟು ಮೇಜು/ನೆಲದ ಮೇಲೆ

ಇಟ್ಟು ಸಮತಲ ಭಾರ ಹೇರಿ ನಾಲ್ಕೈದು ದಿನಗಳಲ್ಲಿ ಒಣಗುತ್ತದೆ. ನಯವಾಗುತ್ತದೆ. ಬಣ್ಣಗೆಡುವುದಿಲ್ಲ. ಇದನ್ನು ಪುಸ್ತಕದ ಹಾಳೆ ಮೇಲೆ ಅಥವಾ ಚಾರ್ಟ್ ಮೇಲೆ ಅಂಟಿಸಿ. ಇದು ಎಲೆಗಳ ಅತ್ಯಂತ ಸರಳವಾದ ಸಂರಕ್ಷಣಾ ವಿಧಾನ.

7. ಕಪ್ಪೆಚಿಪ್ಪುಗಳನ್ನು ಕುದಿಯುವ ನೀರಿನಲ್ಲಿ ಹಾಕಿ ಒಂದೆರಡು ಕುದಿ ಕುದ್ದಿಸಿ ತಣ್ಣಗಾಗಿಸಿ ಅದರಲ್ಲಿನ ಕೊಳೆ ತೆಗೆದು. ಸೋಪಿನಿಂದ ತೊಳೆದು ಒಣಗಿಸಿ. ಇವುಗಳಿಗೆ ವಾರ್‌ನಿಷ್/ಬಣ್ಣ ಹಚ್ಚಿ. ಇವುಗಳ ಮೇಲೆ ಚಿತ್ತಾರ ಬಿಡಿಸಿ. ಹೆಸರು ಬಿಡಿಸಿ. ಗೊಂಬೆ ಮಾಡಿ. ಚಿಕ್ಕಚಿಕ್ಕ ಶಂಖಗಳಿಂದ ಸರ ಮಾಡಿ. ಹೀಗೆ ಅನೇಕ ಶೃಂಗಾರ ಸಾಮಗ್ರಿಗಳನ್ನು ಮಾಡಬಹುದು.

**6. ಮೂಲೆಗಂಟು (Sheet Bend) ಮತ್ತು ಬೆಸ್ತರಗಂಟು ಕಟ್ಟಿ ಬಳಸಿ**

ಕುಣಿಕೆಗೆ ಹಗ್ಗ ಜೋಡಿಸಲು ಎರಡು ಅಸಮ ದಪ್ಪದ ಹಗ್ಗಗಳನ್ನು ಜೋಡಿಸಲು ಧ್ವಜ ಹಾರಿಸಲು ಬಳಸುವರು.



**ಮೂಲೆಗಂಟು (Sheet Bend)**

ಚಿತ್ರದಲ್ಲಿ ತೋರಿಸಿರುವಂತೆ ದಪ್ಪ ದಾರದ ಕುಣಿಕೆ ಮಾಡಿ. ತೆಳುದಾರವನ್ನು ಸುತ್ತಿಸಿ ಕುಣಿಕೆಯ ಒಳಗಿನಿಂದ ಮೇಲೆ ತಂದು ಮೊದಲು ಸುತ್ತಿದ ದಾರದ ಮೇಲಿನಿಂದ ಇಳಿಸಿ ದಪ್ಪ ದಾರದ ಕೆಳಗೆ ತನ್ನಿ. ಗಂಟಿನ ಒಂದು ಭಾಗದಲ್ಲಿ 'x' ಕಾಣುತ್ತದೆ.

**ಬೆಸ್ತರಗಂಟು : Fishermen's Knot**

ಒದ್ದೆ ಹಗ್ಗಗಳನ್ನು ಜೋಡಿಸಲು ಈ ಗಂಟನ್ನು ಬಳಸಲಾಗುವುದು? ಒಂದು ಹಗ್ಗದಿಂದ ಇನ್ನೊಂದು ಹಗ್ಗದ



**ಬೆಸ್ತರಗಂಟು : Fishermen's Knot**

ಮೇಲೆ ಅರೆಗಂಟು ಹಾಕಿ. ಅರೆಗಂಟು ಹಾಕಿದ ಹಗ್ಗದಿಂದ ಮತ್ತೊಂದು ಅರೆಗಂಟು ಹಾಕಿ. ಈ ಎರಡು ಗಂಟುಗಳೂ ಎರಡು ಹಗ್ಗದ ಮೇಲೆ ಸರಿದಾಡುತ್ತವೆ, ಜಾರುವುದಿಲ್ಲ. ಒಂದು ಹಗ್ಗದ ಎರಡು ತುದಿಗಳ ಮೇಲೆ ಒಂದರಿಂದ ಮತ್ತೊಂದಕ್ಕೆ ಗಂಟು ಹಾಕಿ ಎರಡು ಹಗ್ಗವನ್ನು ಅಗಲಿಸಿದರೆ ಅಗಲ ಬಾಯಿಯಾಗುತ್ತದೆ. ಇದನ್ನು ಗಡಿಗೆ, ಕೊಡಪಾನ, ತಪ್ಪಲೆಗಳ ಬಾಯಿಗೆ ಹಾಕಿ ಬಿಗಿದು ಉಳಿದ ಹಗ್ಗವನ್ನು ಹಿಡಿಯಂತೆ ಬಳಸಲಾಗುವುದು. ಇದನ್ನು, ಬಳಸಿ ಭಾರವನ್ನು ಎಳೆಯಬಹುದು.

**7. ಕತ್ತರಿಸಿದ, ತರಚಿದ ಹಾಗು ಸುಟ್ಟ ಗಾಯಕ್ಕೆ ಪ್ರಥಮ ಚಿಕಿತ್ಸೆ ನೀಡಿ –**

ಗಾಯ ಸ್ವಚ್ಛ ಮಾಡುವುದು –

1. ನಿಮ್ಮ ಕೈಯನ್ನು ಸ್ವಚ್ಛ ಮಾಡಿಕೊಳ್ಳಿ
2. ಗಾಯವನ್ನು ನೀರಿನಲ್ಲಿ ತೊಳೆಯಿರಿ. ನೀರಿಗೆ ದೊರೆತರೆ ಒಂದೆರೆಡು ಹನಿ ಡೆಟಾಲ್ ಹಾಕಿ. ಹತ್ತಿ ಅದ್ದಿ ಗಾಯವನ್ನು ಒರೆಸಿ.
3. ಸ್ವಲ್ಪ ರಕ್ತ ಸ್ರಾವಿಸುತ್ತಿದ್ದರೆ ಅಪಾಯವಿಲ್ಲ. ಹೆಚ್ಚಿನ ರಕ್ತ ಸ್ರಾವವಾಗುತ್ತಿದ್ದರೆ ಹಿರಿಯರಿಗೆ ತಕ್ಷಣವೇ ತಿಳಿಸಿ.
4. ಆಂಟಿಸೆಪ್ಟಿಕ್ ಪುಡಿ ನೆಬಾಸಲ್ಫ ಸಿಕ್ಕರೆ ಹಾಕಿ. ಸ್ವಚ್ಛವಾದ ಬಟ್ಟೆ ಇದ್ದರೆ ಮುಚ್ಚಿ.

**ಸರಳ ಸುಟ್ಟಗಾಯ**

ಬಿಸಿ ಒಲೆ ತಾಗಿದಾಗ, ಬಿಸಿನೀರು ಕೈ ಮೇಲೆ ಬಿದ್ದಾಗ, ಉರಿ ತಾಗಿದಾಗ ಸುಟ್ಟಗಾಯವಾಗುತ್ತದೆ. ಸರಳವಾದ ಸುಟ್ಟಗಾಯ ಚರ್ಮವನ್ನು ಕೆಂಪಾಗಿಸುತ್ತದೆ. ಈ ಭಾಗದ ಮೇಲೆ ತಣ್ಣೀರು ಹರಿಸು. ಮಂಜುಗೆಡ್ಡೆ ಸಿಕ್ಕರೆ ಹಾಕಿ ನೋವು ಶಮನವಾದ ನಂತರ ಬರ್‌ನಾಲ್ ಹಚ್ಚಿ. ಇಲ್ಲವೇ ಫೇಸ್ ಕ್ರೀಮ್ ಹಚ್ಚಿ.

**8. ಪಟ್ಟದ ಗುಂಪು ಬುಲ್‌ಬುಲ್ ನಾಯಕಿಯವರ ಜೊತೆ ಶಾಲೆ / ಸುತ್ತಮುತ್ತಲಿನಲ್ಲಿ ಸೇವೆ ಮಾಡಿ –**

ಬುಲ್‌ಬುಲ್ ನಾಯಕಿ ಮೊದಲ ಸದರಿ ಅಧಿಕಾರಿಗಳಿಗೆ ಸತ್ಕಾರ್ಯ ಎಂದರೇನು ಎಂಬ ವಿವರಣೆ ನೀಡಬೇಕು. ಅವರ ಅನುಮತಿ ಪಡೆದ ನಂತರ ಬುಲ್‌ಬುಲ್‌ಗಳ ಸಲಹೆಯ ಮೇರೆಗೆ ಕಾರ್ಯ ಯೋಜನೆ ಸಿದ್ಧಪಡಿಸಬೇಕು. ಯೋಜನೆ ಸಿದ್ಧಪಡಿಸುವಾಗ ಬುಲ್‌ಬುಲ್‌ಗಳ ಕಾರ್ಯಮಿತಿಯು ಗಮನದಲ್ಲಿಟ್ಟುಕೊಳ್ಳಬೇಕು.

ದಿನಾಂಕ ಮತ್ತು ಸಮಯ ಗೊತ್ತುಪಡಿಸಿ ತಪ್ಪದೆ ಅದಕ್ಕನುಗುಣವಾಗಿ ಕೆಲಸ ಮಾಡಬೇಕು.

ಪ್ರತಿ ಬುಲ್‌ಬುಲ್ ತನ್ನ ಪುಟ್ಟ ಪುಸ್ತಕದಲ್ಲಿ ಅವಳು ಮಾಡಿದ ಕೆಲಸದ ಮುಖ್ಯಾಂಶ ಬರೆಯಬೇಕು. ದಿನಾಂಕ, ಭಾಗವಹಿಸಿದ ಬುಲ್‌ಬುಲ್‌ಗಳ ಸಂಖ್ಯೆ, ಅವಧಿ, ಉಪಯೋಗಿಸಿದ ವಸ್ತು, ಸಹಾಯ / ಸೇವೆಯ ಹೆಸರು. ಬುಲ್‌ಬುಲ್ ನಾಯಕಿ ತನ್ನ ಕಾರ್ಯಕ್ರಮದ ಪುಸ್ತಕದಲ್ಲಿ ಈ ಚಟುವಟಿಕೆಯ ಸಂಕ್ಷಿಪ್ತ ವರದಿ ಬರೆಯಬೇಕು. ಇದರಲ್ಲಿ ಆ ಸ್ಥಳ ಗೊತ್ತು ಪಡಿಸಿದ್ದಕ್ಕೆ ಕಾರಣ ಮತ್ತು ಆ ಸೇವೆಯ ಯಶಸ್ಸಿಗೆ ಬುಲ್‌ಬುಲ್‌ಗಳ ಕೊಡುಗೆಯನ್ನು ನಮೂದಿಸಬೇಕು.

**9. ಕೆಳಗಿನವುಗಳಲ್ಲಿ ಯಾವುದಾದರೂ ಮೂರನ್ನೂ ಪ್ರದರ್ಶಿಸಿ**

ಅ) ಒಂದು ತಿಂಗಳು ನಿನ್ನ ಹಾಸಿಗೆಯನ್ನು ನೀನೇ ಹಾಸಿಕೊ.

ಆ) ನಮ್ಮ ರಾಷ್ಟ್ರದ ಧ್ವಜದ ಮಹತ್ವವನ್ನು ತಿಳಿ.

ಇ) ಬೀಜ ಬಿತ್ತಿ, ಗಿಡ ಬೆಳೆಸಿ, ಗಿಡದ ಬೆಳವಣಿಗೆಯನ್ನು ಗಮನಿಸುತ್ತಾ ವರದಿ ಬರೆದು ನಾಯಕಿಯವರಿಗೆ ಸಲ್ಲಿಸಿ. ಬುಲ್‌ಬುಲ್‌ಗಳು ಹಾಸಿಗೆ ಹಾಕುವ ಮತ್ತು ನಿತ್ಯ ಕಾರ್ಯದಲ್ಲಿ ಸಹಾಯ ಮಾಡಬೇಕು.

**ಅ) ಹಾಸು (Bedsheet)**

ಹಾಸು (Bedsheet) ತೆಗೆದು ಹಾಸಿಗೆಯ ಮೇಲಿನ ಧೂಳನ್ನು ಝಾಡಿಸಿ. ಹಾಸಿಗೆಯ ಮೇಲೆ ಹಾಸಿ ಉಳಿದ ಭಾಗವನ್ನು ಹಾಸಿಗೆಯ ಒಳಗೆ ಸೇರಿಸಿ. ಸುಕ್ಕಿಲ್ಲದಂತೆ ಹಾಸಿ. ಇದರಿಂದ ಹೊರಳಾಡಿದರೂ ಹಾಸಿಗೆ ಸುಕ್ಕಾಗುವುದಿಲ್ಲ. ಹಾಸಿದ ಮೇಲೆ ದಿಂಬು ಇಡಿ. ಹೊದಿಯುವ ಹಾಸನ್ನು ಸರಿಯಾಗಿ ಮಡಚಿ ಕಾಲಿನ ಬಳಿ ಇಡಿ. ಹಾಸಿಗೆ ಅಂದವಾಗಿ ಅಚ್ಚುಕಟ್ಟಾಗಿರಬೇಕು. ನೋಡಿದವರಿಗೆ ಮಲಗಬೇಕು ಎಂಬ ಆಕರ್ಷಣೆಯುಂಟಾಗಬೇಕು. ಮಲಗಲು ಸುಖಕರವಾಗಿರಬೇಕು. ಹೀಗೆ ಹಾಸುವ ಅನೇಕ ವಿಧಗಳಿವೆ. ನೀನು ನಿನ್ನ ಮನೆಯ ವಿಧಾನವನ್ನು ಅನುಕರಿಸು.

**ಆ) ನಮ್ಮ ರಾಷ್ಟ್ರಧ್ವಜದ ಮಹತ್ವ :**

ಈ ಧ್ವಜವು ನಮ್ಮರಾಷ್ಟ್ರದ ಹೆಮ್ಮೆಯ ಪ್ರತೀಕ. ಇದು ರಾಷ್ಟ್ರದ ಭವ್ಯತೆ ಮತ್ತು ಗೌರವ. ನಾವು ನಮ್ಮ ರಾಷ್ಟ್ರಧ್ವಜವನ್ನು ಗೌರವಿಸಬೇಕು.



ಇದು ಉದ್ದ ಮತ್ತು ಅಗಲ 2:3 ಪ್ರಮಾಣದಲ್ಲಿರುವ ಆಯತ. ಇದರ ಉದ್ದ 2 ಅಡಿ ಇದ್ದರೆ, ಅಗಲ 3 ಅಡಿಗಳು ಇರಬೇಕು. ಇದರಲ್ಲಿ 3 ಬಣ್ಣಗಳ 3 ಸಮಾನ ಪಟ್ಟಿಗಳು ಇರಬೇಕು. ಮೇಲೆ ಕೇಸರಿ, ಮಧ್ಯೆ ಬಿಳಿ, ಕೆಳಗೆ ಹಸಿರು. ಬಿಳಿ ಪಟ್ಟಿಯಲ್ಲಿ ನೀಲಿಬಣ್ಣದ ಚಕ್ರವಿದೆ.

ಕೇಸರಿ ತ್ಯಾಗ ಮತ್ತು ಧೈರ್ಯದ ಸಂಕೇತವಾಗಿದೆ. ಬಿಳಿ ಸತ್ಯ ಮತ್ತು ಶಾಂತಿಯ ಸಂಕೇತವಾಗಿದೆ. ಹಸಿರು ಪ್ರಾಕೃತಿಕ ಸಮೃದ್ಧಿ ಮತ್ತು ಪ್ರಗತಿಯ ಸಂಕೇತವಾಗಿದೆ. ನಾವು ನಮ್ಮ ರಾಷ್ಟ್ರವನ್ನು ಹಸಿರಾಗಿಸಬೇಕು, ಸಂತಸವಾಗಿರಿಸಬೇಕು.

ಚಕ್ರ ನಿಲ್ಲದೇ ಸದಾ ಚಲಿಸುವ ಪ್ರಗತಿಯ ಸಂಕೇತ. ಇದರಲ್ಲಿ 24 ಕಡ್ಡಿಗಳಿವೆ. 24 ಘಂಟೆಯೂ ಕರ್ತವ್ಯ ಮತ್ತು ಸೇವೆ ಮಾಡುವಂತ ಸಂದೇಶ ನೀಡುತ್ತದೆ. ಚಕ್ರದ ಮಧ್ಯೆ ಇರುವ ಚಿಕ್ಕ ವೃತ್ತ ಅನೇಕತೆಯಲ್ಲಿ ಏಕತೆಯನ್ನು ಪ್ರತಿಪಾದಿಸುತ್ತದೆ. ವಿವಿಧ ಜಾತಿ, ಮತ, ಧರ್ಮ, ಭಾಷೆ, ರಾಜ್ಯ, ಸಂಸ್ಕೃತಿಗಳನ್ನು ಹೊಂದಿದ್ದರು ಭಾರತೀಯರು ನಾವು ಎಂದೆಂದೂ ಒಂದೇ ಎಂಬ ಏಕತೆಯನ್ನು ಸಾರುತ್ತದೆ. ನಾವು ಭಾರತ ಸಾರ್ವಭೌಮತ್ವಕ್ಕೆ ಸೇರಿದವರು.

ಧ್ವಜವು ನಮಗೆ ನೀಡುವ ಸಂದೇಶ ಸದಾ ಸಹವಾಸಿಗಳನ್ನು ಪ್ರೀತಿಸುತ್ತಾ, ದುರ್ಬಲರನ್ನು ರಕ್ಷಿಸುತ್ತಾ, ಧೈರ್ಯದಿಂದ ಶಾಂತಿಯನ್ನು ಅರಸುತ್ತಾ, ಪ್ರಗತಿಯನ್ನು ಸಾಧಿಸುತ್ತಾ ಚಲಿಸಿ. ಭಾರತದ ಉದ್ದೇಶವೂ ವಿಶ್ವದಲ್ಲಿ ಪ್ರೀತಿ ಮತ್ತು ಸ್ನೇಹದ ಸಂದೇಶವನ್ನು ಪ್ರಸಾರ ಮಾಡುವುದಾಗಿದೆ.

**ಇ) ಬೀಜ ನೆಟ್ಟು ಗಿಡ ಬೆಳಸಿ, ಬೆಳವಣಿಗೆಯನ್ನು ವೀಕ್ಷಿಸಿ ದಾಖಲಿಸಿ ನಾಯಕಿಗೆ ವರದಿ ಮಾಡಿ ಅಥವಾ ಪಕ್ಷಿಯ ಆಹಾರ ಪೆಟ್ಟಿಗೆ ಮಾಡಿ ಅಥವಾ ಉದ್ಯಾನದಲ್ಲಿರುವ ಚಿಲುಮೆಯನ್ನು 2 ತಿಂಗಳು ಕಾಪಾಡಿ**

ಮಕ್ಕಳಿಗೆ ಗಿಡಗಳೆಂದರೆ ಇಷ್ಟ. ಮಣ್ಣು ಅಗೆಯುವುದು ಅದರಲ್ಲಿ ಆಡುವುದೆಂದರೆ ಬಲು ಇಷ್ಟ. ಮಕ್ಕಳಿಗೆ ಒಂದೆರಡು ಚದರ ಅಡಿ ನೆಲಕೊಡಿ. ಸಾಧ್ಯವಾಗದಿದ್ದರೆ ಕುಂಡ, ಮರದ ಪೆಟ್ಟಿಗೆ, ಡಬ್ಬ, ಪ್ಲಾಸ್ಟಿಕ್ ಚೀಲ, ತೆಂಗಿನ ಚಿಪ್ಪು

ಏನಾದರು ಸರಿ. ಅವರು ಫಲವತ್ತಾದ ಮಣ್ಣನ್ನು ಸಂಗ್ರಹಿಸಿ ಅದನ್ನು ತಮ್ಮ ಬಳಿ ಇರುವ ಧಾರಕಕ್ಕೆ (container) ತುಂಬಲಿ. ಯಾವುದೇ ಧಾರಕವಾದರು ಕೆಳಗೆ ಒಂದು ತೂತು ಮಾಡಿ. ಇದರಿಂದ ಹೆಚ್ಚಾದ ನೀರು ಹೊರಹೋಗುತ್ತದೆ. ಆದರೆ ಎಲ್ಲಾ ನೀರು ಹರಿಯದಂತೆ ತಡೆಯಲು ತೂತಿಗೆ ತೆಂಗಿನ ಚಿಪ್ಪಿನ/ಹೆಂಚಿನ/ಕಲಿನ ಚೂರು ಇಡಬೇಕು. ನಂತರ ಮಣ್ಣನ್ನು ತುಂಬಬೇಕು. ಒಂದೆರಡು ದಿನ ನೀರು ಹಾಕಿ ಹದಗೊಳಿಸಬೇಕು. ನಿಮ್ಮ ಮಾರ್ಗದರ್ಶನದಲ್ಲಿ ಬುಲ್‌ಬುಲ್‌ಗಳು ಆರಿಸಿದ ಬೀಜವನ್ನು ಮಣ್ಣಿನಲ್ಲಿ ಗುಣಿ ಮಾಡಿ ಹಾಕಿ. ಮೇಲೆ ಹಗುರವಾಗಿ ಮಣ್ಣು ಹಾಕಿ. ನೀರು ಚಿಮುಕಿಸಿ, ಧಾರಕವನ್ನು ಬೆಳಕು ಗಾಳಿ ದೊರೆಯುವಂತೆ ಮನೆಯಿಂದ ಹೊರಗೆ ಇಡಿಸಿ. ಕೆಲವು ಬೇಗನೆ ಮೊಳೆಯುತ್ತವೆ ಕೆಲವು ನಿಧಾನವಾಗಿ ಮೊಳೆಯುತ್ತವೆ. ಮೊಳೆತ ಸಸಿಗಳಿಗೆ ಅಪಾಯವಾಗದಂತೆ ನೀರನ್ನು ಹಾಕಬೇಕು. ಹೀಗೆ ದಿನ ಕಳೆದಂತೆ 10 ರಿಂದ 15 ದಿನಗಳಲ್ಲಿ ಮೊದಲ ಎರಡು ಎಲೆ ಕಾಣುತ್ತವೆ. ಈ ಪ್ರತಿಕ್ರಿಯೆಯನ್ನು ಬುಲ್‌ಬುಲ್‌ಗಳು ವೀಕ್ಷಿಸಬೇಕು. ಇವುಗಳು ಬೆಳೆದಂತೆ ಎಲೆಗಳು ಹೆಚ್ಚಾದಂತೆ ಹೂವು ಬರುತ್ತದೆ.

ನೆಲ ಸಿಕ್ಕಿದರೆ ಅಗೆದು ಮಣ್ಣು ಸಡಿಲಿಸಿ ಬೀಜನೆಟ್ಟು ನೀರು ಚಿಮುಕಿಸಬೇಕು. ಮಿಕ್ಕೆಲ್ಲ ಪ್ರಕ್ರಿಯೆ ಮೇಲಿನಂತೆ ಸಾಮಾನ್ಯ.

ಈ) ಒಬ್ಬ ಬುಲ್‌ಬುಲ್ ಒಂದು ಸಸ್ಯವನ್ನಾದರೂ ಬೆಳೆದು ಆನಂದಿಸಬೇಕು. ಸಸ್ಯ ಸ್ನೇಹಿಯಾಗಬೇಕು. ಅಥವಾ ಆಹಾರದ ಬಾನಿ ಮಾಡಿ ನಿಮ್ಮ ಮನೆಯ ಹೊರಗೆ ಅಥವಾ ಮರಕ್ಕೆ ಕಟ್ಟಿ ಅದರಲ್ಲಿ ಕಾಳುಗಳನ್ನು ಹಾಕಿಡಿ. ದಿನವೂ ಪಕ್ಷಿಗಳು ಬಂದು ಹೋಗುವುದನ್ನು ಗಮನಿಸಿ. 2 ತಿಂಗಳು ಆಹಾರದ ಬಾನಿ ಇರಲಿ. ಪಕ್ಷಿ ಬಂದಾಗ ಅದರ ಕೊಕ್ಕು, ಪುಕ್ಕ, ಬಾಲ. ಅದರ ಅಭ್ಯಾಸಗಳನ್ನು ಅಧ್ಯಯನ ಮಾಡಿ, ವರದಿ ಮಾಡುವುದು.

**ಉ) ಯಾವುದಾದರೂ ನಿನ್ನ ಇಷ್ಟದ ಚಿತ್ರ ಬರೆದು ಬಣ್ಣ ತುಂಬು –**

ತೆಳು ಗೆರೆಯಲ್ಲಿ ಚಿತ್ರ ಪೆನ್ಸಿಲ್‌ನಲ್ಲಿ ಬರೆದು ಕೊಳ್ಳಲಿ. ಅಳಸಿ ಬರೆದು ಸರಿಮಾಡು. ನಂತರ ದಪ್ಪ ಗೆರೆ ಹಾಕಿಕೊಂಡು ಬಣ್ಣ ತುಂಬಿ ಚಿತ್ರ ಅಭ್ಯಾಸ ಮಾಡಿ ನಂತರ ಚಿತ್ರ ಬಿಡಿಸಲಿ. ಬಣ್ಣದ ಆಯ್ಕೆ ಅವರದು. ಕ್ರೆಯಾನ್, ಬಣ್ಣದ ಪೆನ್ಸಿಲ್, ಸ್ಕೆಚ್‌ಪೆನ್ ಅಥವಾ ಜಲವರ್ಣ ಬಳಸಲಿ. ಎಲ್ಲಾ ಬುಲ್‌ಬುಲ್‌ಗಳು ಬರೆಯುವಂತೆ ಪ್ರೋತ್ಸಾಹಿಸಿ.

**ಊ) ಲಾಟಿನಿನ ಗಾಜು ಶುದ್ಧಗೊಳಿಸಿ ಬತ್ತಿ ಸರಿಮಾಡಿ ಸೀಮೆಎಣ್ಣೆ ತುಂಬಿ, ಹತ್ತಿಸಿ. ಹೀಗೆ ಮಾಡಿ :**



1. ಲಾಟಿನ್‌ನನ್ನು ವೃತ್ತ ಪತ್ರಿಕೆ ಮೇಲಿಡಿ.
2. ಗಾಜಿನ ಕವಚ ಎಚ್ಚರಿಕೆಯಿಂದ ತೆಗೆಯಿರಿ.
3. ಅದನ್ನು ಬಣ್ಣದ ಬಟ್ಟೆಯಿಂದ ಒರೆಸಿ, ನಿಮ್ಮ ಕೈ ತಾಗದಂತೆ ದೂರವಿಡಿ.
4. ಪ್ರತಿದಿನ ಉರಿದ ಬತ್ತಿ ತುದಿ ಕತ್ತರಿಸಿ.
5. ಸೀಮೆ ಎಣ್ಣೆ ಹನಿಯು ಚಲ್ಲದಂತೆ ಹಾಕಿ ಮುಚ್ಚಳ ಗಟ್ಟಿಯಾಗಿ ಮುಚ್ಚಿ. ಬೆಂಕಿಯ ಬಳಿ ಈ ಕೆಲಸ ಮಾಡಬೇಡಿ.
6. ನಂತರ ಗಾಜಿನ ಕವಚ ಜೋಡಿಸಿ.
7. ಚಿಮನಿ ಸ್ವಚ್ಛಗೊಳಿಸಿ.
8. ಗಾಜಿನ ಕವಚ ಎತ್ತಿ ದೀಪ ಹೊತ್ತಿಸಿ ನಂತರ ಸರಿಯಾಗಿ ಮುಚ್ಚಿ.
9. ತಿರುಗಣಿ ತಿರುಗಿಸಿ ದೀಪ ಹತ್ತಿಸಿ, ಆರಿಸಿ.

ಇಂದು ಲಾಟೀನು ಅಪರೂಪವಾಗಿದೆ. ಎಲ್ಲರೂ ಕೈದೀಪ (Torch) Or Emergency Light ಬಳಸುತ್ತಿದ್ದಾರೆ.

**ಋ) ಕರವಸ್ತ್ರವನ್ನು ತಯಾರಿಸಿ ನಿಮ್ಮ ಅಮ್ಮನಿಗೆ ಉಡುಗೊರೆಯಾಗಿ ಕೊಡಿ / Make a Hand Kerchief and present it to your Mother.**

10. ಷಟ್ಕವು ಬುಲ್‌ಬುಲ್ ನಾಯಕಿ/ಸಹನಾಯಕಿಯರ ಸುಳುಹು ಅನುಸರಿಸಿ 1/2 ಕಿಲೋಮೀಟರ್ ಕ್ರಮಿಸಿ ಬರಲಿ.
11. ಕೋಮಲ್ ಪಂಖ ಬುಲ್‌ಬುಲ್ ಕನಿಷ್ಠ ರಜತ ಪಂಖದ 8 ಹಿಂಡಿನ ಸಭೆಗೆ ತಪ್ಪದೆ ಹಾಜರಾಗಬೇಕು.
12. ಕನಿಷ್ಟ ಎರಡು ಸರ್ವಧರ್ಮ ಪ್ರಾರ್ಥನಾ ಸಭೆಯಲ್ಲಿ ಭಾಗವಹಿಸಿ.
13. ಕಿಮ್ಸ್‌ನ ಆಟದಲ್ಲಿ ಭಾಗವಹಿಸಿ.
14. ಸಂರಕ್ಷಣೆಯೇ ಮೂರು "ಆರ್"ಗಳ ಬಗ್ಗೆ ತಿಳಿಯಿರಿ. ಕಡಿಮೆ ಬಳಕೆ, ಪುನರ್ ಬಳಕೆ, ಪುನರಾವರ್ತನೆ ಮಾಡಿ (Reduce, Reuse, Recycle)



# 14. ಸುವರ್ಣ ಪಂಖ




1. ಉಪಯುಕ್ತ ಕರಕುಶಲ ವಸ್ತುಗಳನ್ನು ತಯಾರಿಸಿ ವಿಕಲಾಂಗರಿಗೆ ನೀಡಿ.

**ಸಸ್ಯ ಸಂಚಿ**

ಸಸ್ಯದ ಭಾಗಗಳನ್ನು ಕೆಡದಂತೆ ಅಂದಕ್ಕಾಗಿ ಪಾರದರ್ಶಕ ಪ್ಲಾಸ್ಟಿಕ್ ಚೀಲ ಅಥವಾ ಡಬ್ಬಿಗಳಲ್ಲಿ ಒಣಗಿಸಿ ಇಡುವುದು.

**ಓಲಾಡುವ ಕುದುರೆ –**



ದಪ್ಪ ಕಾಗದ, ಪೆನ್‌ಸಿಲ್ ಕತ್ತರಿ ಮತ್ತು ಅಂಟು ಬೇಕು.

ಎರಡು ಕುದುರೆಯನ್ನು ದಪ್ಪ ಹಾಳೆಯ ಮೇಲೆ ಕಾರ್‌ಬನ್ ಶೀಟ್ ಮತ್ತು ಪೆನ್‌ಸಿಲ್ ಸಹಾಯದಿಂದ ಮೂಡಿಸಿ, ಕತ್ತರಿಸಿ. ಅರ್ಧ ಭಾಗದ ಎರಡು ಕುದುರೆಗಳನ್ನು ಅಂಟಿಸಿ. ಕಾಲುಗಳು ಸ್ವತಂತ್ರವಾಗಿರಲಿ. ಕಾಲುಗಳನ್ನು ಅರ್ಧಚಂದ್ರಾಕಾರದ ಪಟ್ಟಿ ಕತ್ತರಿಸಿ ಅದಕ್ಕೆ ಅಂಟಿಸಿ ಕುದುರೆ ಮೇಜಿನ ಮೇಲಿಡಿ ಸ್ವಲ್ಪ ಅಲುಗಾಡಿಸಿದರೆ ಕುದುರೆ ಓಲಾಡಲಾರಂಭಿಸುತ್ತದೆ.

**2. ದಿಕ್ಸೂಚಿಯಲ್ಲಿನ 8 ಪ್ರಧಾನ ದಿಕ್ಕುಗಳನ್ನು ತಿಳಿಯಿರಿ**

ಬುಲ್‌ಬುಲ್‌ಗಳಿಗೆ ಸೂರ್ಯ ಹುಟ್ಟುವ ದಿಕ್ಕು ತಿಳಿದಿರುತ್ತದೆ. ಇದರ ಸಹಾಯದಿಂದ ಉಳಿದ ದಿಕ್ಕು ತಿಳಿಯಲು ಕಲಿಸಿ. ಸೂರ್ಯ ಹುಟ್ಟುವ ದಿಕ್ಕಿಗೆ ಮುಖಮಾಡಿ ಅದು ಪೂರ್ವ ನಂತರ ಎಡಕ್ಕೆ ಉತ್ತರ, ಬಲಕ್ಕೆ ದಕ್ಷಿಣ, ಹಿಂದಕ್ಕೆ ಪಶ್ಚಿಮ ದಿಕ್ಕು ಇರುತ್ತದೆ.




ದಿಕ್ಸೂಚಿ ಚಿತ್ರ ಬರೆಸಿ. ಹಾಳೆ/ನೆಲದ ಮೇಲೆ ವೃತ್ತ ಹಾಕಿಸಿ. ಪೂರ್ವ ಗುರುತಿಸಿ ಪಶ್ಚಿಮಕೆ ವೃತ್ತವನ್ನು ಅರ್ಧಿಸಿ. ಇದರ ಸಹಾಯದಿಂದ ಲಂಬವಾಗಿ ವೃತ್ತ ಅರ್ಧಿಸಿ. ಉತ್ತರ ದಕ್ಷಿಣ ಗುರುತಿಸಿ. ದಿಕ್ಸೂಚಿ ಇಲ್ಲದಿದ್ದರೆ ಈ ವಿಧಾನ ಅನುಸರಿಸಿ.

ದಿಕ್ಸೂಚಿ ಇದ್ದರೆ ಉತ್ತರ ಗುರುತಿಸಿ ನಂತರ ಉಳಿದ ದಿಕ್ಕುಗಳನ್ನು ಗುರುತಿಸಿ. ಈ ದಿಕ್ಕುಗಳ ಕೋನಾಂತರ $90^0$ ಈಗ ಈ ಕೋನಗಳನ್ನು ಅರ್ಧಿಸುವ 4 ಗೆರೆ ಎಳೆಯಿರಿ. ಒಟ್ಟು $45^0$ಯ 8 ಕೋನವಾಗುವುದು. ಪುನಃ ಉತ್ತರದಿಂದ ಪ್ರಾರಂಭಿಸಿ. ಉತ್ತರ–ಪೂರ್ವ ಮಧ್ಯೆ ಇರುವ ದಿಕ್ಕು ಈಶಾನ್ಯ (NE), ಪೂರ್ವ–ದಕ್ಷಿಣ ಮಧ್ಯೆ ಇರುವ ದಿಕ್ಕು ಆಗ್ನೇಯ (SE), ದಕ್ಷಿಣ–ಪಶ್ಚಿಮ ಮಧ್ಯೆ ಇರುವ ದಿಕ್ಕು ನೈರುತ್ಯ (SW), ಪಶ್ಚಿಮ–ಉತ್ತರ ಮಧ್ಯೆ ಇರುವ ದಿಕ್ಕು ವಾಯುವ್ಯ (NW), ಇವುಗಳು ಉಪದಿಕ್ಕುಗಳು. ಒಟ್ಟು ನಾಲ್ಕು ಪ್ರಧಾನ ಮತ್ತು ನಾಲ್ಕು ಉಪ ದಿಕ್ಕುಗಳನ್ನು ಪರಿಚಯಿಸಿ ದಿಕ್ಸೂಚಿ ಸಹಾಯದಿಂದ ಹಾಗೂ ದಿಕ್ಸೂಚಿ ಇಲ್ಲದೆ ದಿಕ್ಕನ್ನು ಕಂಡು ಹಿಡಿಯುವ ವಿಧಾನವನ್ನು ಅಭ್ಯಾಸ ಮಾಡಿಸಿ. ದಿಕ್ಕನ್ನು ಬಳಸಿ ಆಟ ಆಡಿಸಿ.

### 3. ನಿಮ್ಮ ಹಳ್ಳಿ ಅಥವಾ ನಗರದಲ್ಲಿ ಬಸ್ ನಿಲ್ದಾಣ, ರೈಲು ನಿಲ್ದಾಣ, ಅಗ್ನಿಶಾಮಕ ದಳಗಳಿರುವ ಸ್ಥಳಗಳನ್ನು ತಿಳಿ : ಬ್ಯಾಂಕ್, ಅಂಚೆಕಛೇರಿ, ಕಾಲೇಜು, ಆಸ್ಪತ್ರೆ ಮತ್ತು ಶಾಲೆಗಳು

ಬುಲ್‌ಬುಲ್‌ಗಳು ಅಪರಿಚಿತರಿಗೆ ಈ ಸ್ಥಳಗಳ ಮಾಹಿತಿ ನೀಡುವುದನ್ನು ಮಾರ್ಗದರ್ಶನ ಮಾಡುವುದನ್ನು ತಿಳಿದಿರಬೇಕು. ಬೆಂಕಿ ಅಪಘಾತವಾದಾಗ ಅಗ್ನಿಶಾಮಕ ದಳದ ದೂರವಾಣಿ ಸಂಖ್ಯೆ ಮತ್ತು ವಿಳಾಸ ತಿಳಿದಿದ್ದರೆ ಬುಲ್‌ಬುಲ್‌ಗಳು ಸಹಾಯ ಮಾಡಬಹುದು.

- ಇವುಗಳ ದೂರವಾಣಿ ಸಂಖ್ಯೆ ವಿಳಾಸ ತಿಳಿದಿರಲಿ.
- ರೈಲು ಬಸ್ಸಿನ ಬಗ್ಗೆ ಚಿತ್ರ ಪುಸ್ತಕ ಮಾಡಲಿ.
- ರಸ್ತೆ ಸುರಕ್ಷತಾ ದಿನ ಮತ್ತು ರೈಲು ಸಪ್ತಾಹ ಆಚರಣೆಯಲ್ಲಿ ಭಾಗವಹಿಸಲಿ.

**4. ಉಳುಕು, ಕುಟುಕು ಗಾಯಗಳಿಗೆ ಪ್ರಥಮ ಚಿಕಿತ್ಸೆ ಮಾಡುವುದನ್ನು ತಿಳಿದಿರಬೇಕು ಮತ್ತು ಗಾಯವನ್ನು ಸ್ವಚ್ಛ ಮಾಡಲು ತಿಳಿದಿರಬೇಕು.**

**ಉಳುಕು :** ಕಾಲು ಕೈ ತಿರುಚಿದಾಗ ನರ ಹೊರಳಿ ಉಳುಕು ಉಂಟಾಗುತ್ತದೆ. ಅಥವಾ ಸ್ನಾಯು ಮತ್ತು ಅಸ್ತಿಬಂಧಕಗಳ ಸ್ಥಾನ ಪಲ್ಲಟದಿಂದ ಉಂಟಾಗುತ್ತದೆ.

**ಲಕ್ಷಣಗಳು :** ಕೀಲುಗಳಲ್ಲಿ ನೋವು, ಊತ, ಚಲಿಸಲಾಗುವುದಿಲ್ಲ.

**ಚಿಕಿತ್ಸೆ :** ಉಳುಕಿದ ಭಾಗ ಅಚಲ ಮಾಡಿ, ಅದಕ್ಕೆ ಆಧಾರವಾಗಿ ಪಟ್ಟಿ (Bandage) ಕಟ್ಟಿ. ಬ್ಯಾಂಡೇಜ್ ಒದ್ದೆ ಮಾಡಿ. ಷೂಸ್ ಹಾಕಿದಾಗ ಉಳುಕಿದರೆ ಷೂ ಸಹಿತ ಕಟ್ಟಿ ಅದು ಆಧಾರ ನೀಡುತ್ತದೆ. ಅದರ ಸಹಿತ ನೀರಿನಲ್ಲಿ ಅದ್ದಿ.

**ಕುಟುಕು :** ಜೇನು ನೊಣಗಳು, ಚೇಳು ಇತ್ಯಾದಿ ಕುಟುಕುತ್ತವೆ. ಮುಳ್ಳು ಚರ್ಮದಲ್ಲಿದ್ದರೆ ಪೂರ್ತಿನಾಶಮಾಡಿ (Sterlization) ಸೂಜಿಯಿಂದ ಕೆದಕಿ ತೆಗೆಯಿರಿ. ಈರುಳ್ಳಿ ರಸ, ಸೋಡಿಯಂ ಬೈಕಾರ್ಬನೇಟ್ (ಅಡಿಗೆ ಸೋಡಾ) ದ್ರಾವಣ ಅಥವಾ ವಿನಿಗರ್‌ನಿಂದ ತೊಳೆಯಿರಿ. ತಕ್ಷಣವೇ ಹಿರಿಯರಿಗೆ ಹೇಳಿ, ವೈದ್ಯರಲ್ಲಿಗೆ ಕರೆದುಕೊಂಡು ಹೋಗಿ. ಗಾಯ ಶುದ್ಧ ಮಾಡುವಾಗ ಕೈಗಳು ಸ್ವಚ್ಛವಾಗಿರಬೇಕು. ನಂತರ ತೆಳು ಹತ್ತಿ ಬಟ್ಟೆಯಿಂದ ಮುಚ್ಚಿ.

**5. ಒಂದು ಸಾರ್ವಜನಿಕ ಸ್ಥಳವನ್ನು ದತ್ತು ತೆಗೆದುಕೊಳ್ಳುವ ಮೂಲಕ ಹಿಂಡಿನ ಸತ್ಕಾರ್ಯದಲ್ಲಿ ಭಾಗವಹಿಸಿ**

ಈ ಕುರಿತು ಹಕ್ಕಿಗಳ ಸಭೆಯಲ್ಲಿ (ಪೌವ್‌ವವ್) ಚರ್ಚಿಸಿ. ಸ್ಥಳ ಗುರುತಿಸಿ. ಅಲ್ಲಿ ಏನು ಕೆಲಸ ಮಾಡಬೇಕೆಂದು ನಿರ್ಧರಿಸಿ. ಸದರಿ ಸ್ಥಳದ ಯಜಮಾನರಿಂದ ಅನುಮತಿ ಪಡೆಯಿರಿ. ಮುಖ್ಯ ಶಿಕ್ಷಕರು/ಪ್ರಾಂಶುಪಾಲರಿಂದ ಅನುಮತಿ ಪಡೆಯಿರಿ. ಸಂಬಂಧಪಟ್ಟ ಅಧಿಕಾರಿಗಳಿಗೆ ಅಧಿಕೃತ ಮನವಿ ಪತ್ರ ಕಳುಹಿಸಿ. ಇದು ಅಲ್ಪಾವಧಿ ಅಥವಾ ದೀರ್ಘಾವಧಿ ಕಾರ್ಯಕ್ರಮವಾಗಿರಬಹುದು. ಖರ್ಚು ವೆಚ್ಚದ ಬಗ್ಗೆ ವಿಚಾರ ಮಾಡಿ. ಬೇಕಾದ ಸಲಕರಣೆ ಸಿದ್ಧ ಮಾಡಿಕೊಳ್ಳಿ. ಈ ಕಾರ್ಯಕ್ಕೆ ಶಾಲಾ ತೋಟ, ಹತ್ತಿರದ ಉದ್ಯಾನವನ ಆಗಬಹುದು.

ಇವುಗಳಲ್ಲದೆ ಕಸ ಎಸೆಯುವ ಬಗ್ಗೆ ಜನಜಾಗೃತಿ, ಆಸ್ಪತ್ರೆಗಳಿಗಾಗಿ ವೃತ್ತ ಪತ್ರಿಕೆ, ಮಾಸಿಕ ಪತ್ರಿಕೆ, ಕಥೆ ಪುಸ್ತಕಗಳ ಸಂಗ್ರಹ, ಪ್ರಾಣಿದಯಾ ಸಂಘ ಕಾರ್ಯಕ್ರಮಗಳಲ್ಲಿ ಭಾಗವಹಿಸುವುದು ಮುಂತಾದ ಕಾರ್ಯಕ್ರಮಗಳನ್ನು ಒಂದು ವಾರದಿಂದ ಒಂದು ತಿಂಗಳವರೆಗೆ ಮಾಡಬಹುದು.

ಮಾಡಿದ ಕೆಲಸಗಳ ವಿವರ ದಾಖಲಿಸಿ. ಮಾಡುವ ಕೆಲಸವನ್ನು ಸ್ಥಳೀಯ/ ಜಿಲ್ಲಾ ಸಂಸ್ಥೆಗೆ ತಿಳಿಸಿ. ನಿಮ್ಮ ವರದಿಯಲ್ಲಿ ಹಿಂದಿನ ದಿನಾಂಕ, ಕೈಗೊಂಡ ಕಾರ್ಯ, ಸ್ಥಳ, ಬುಲ್‌ಬುಲ್‌ಗಳ ಸಂಖ್ಯೆ, ಬಳಸಿದ ಸಲಕರಣೆ, ಜನ ಹಾಗು ಅಧಿಕಾರಿಗಳ ಸಹಾಯ ಮತ್ತು ಮಕ್ಕಳ ಅನುಭವಗಳನ್ನು ದಾಖಲಿಸಿ. ಸಾಧ್ಯವಿದ್ದರೆ ಛಾಯಾಚಿತ್ರ ತೆಗೆದು ಅಂಟಿಸಿ.

**6. ಕನಿಷ್ಠ ಮೂರು ವಿಧದ ಜ್ಞಾನೇಂದ್ರೀಯ ತರಬೇತಿ ಆಟಗಳಲ್ಲಿ ಭಾಗವಹಿಸಿ**

**ವೀಕ್ಷಣಾಟ :**

ಒಂದು ಪೆನ್ / ಉರಿಯುತ್ತಿರುವ ಮೇಣದ ಬತ್ತಿ / ಹಣತೆ / ಗೊಂಬೆ / ಚೆಂಡು / ಹೂವು / ಮರ ಹೀಗೆ ವಸ್ತುಗಳನ್ನು ಇಡಿ. ಅದನ್ನು ತದೇಕ ಚಿತ್ತವಾಗಿ 2 ನಿಮಿಷ ವೀಕ್ಷಿಸಲಿ. ನಂತರ ಅವುಗಳ ಆಕಾರ, ಗಟ್ಟಿ, ಮೃದು, ಬಣ್ಣ, ಉಪಯೋಗ ಅವರಿಗೆ ಅನ್ನಿಸಿದ್ದೆಲ್ಲಾ ಬರೆಯಲಿ. ನಂತರ ಓದಿಸಿ. ಈ ಆಟ ಆಗಿಂದಾಗ್ಗೆ ಆಡಿಸುವುದರಿಂದ ವೀಕ್ಷಣಾ ಸಾಮರ್ಥ್ಯ ಬೆಳೆಯುತ್ತದೆ.

ಕನಿಷ್ಠ 25 ಬುಲ್‌ಬುಲ್‌ಗಳು ಬಳಸುವ ವಸ್ತುಗಳು / ಅವರ ಸುತ್ತಲೂ ಇರುವ ವಸ್ತುಗಳನ್ನು ಜೋಡಿಸಿ. ಎರಡು ನಿಮಿಷ ವೀಕ್ಷಿಸಲು ಬಿಡಿ. ನಂತರ ಬರೆಯಲು ಹೇಳಿ.

ಬುಲ್‌ಬುಲ್‌ಗಳಿಗೆ ವಸ್ತು ಸಂಗ್ರಹಿಸಿ ಜೋಡಿಸಲು ಹೇಳಿ. ಅವುಗಳ ಲಕ್ಷಣ ಮೃದು, ಗಟ್ಟಿ, ನುಣುಪು, ಒರಟು, ಗುಂಡು, ಚಪ್ಪಟೆ ಅಂಟು ಹೀಗೆ ಎಲ್ಲವನ್ನು ಪ್ರತ್ಯೇಕ ಗುಂಪುಗಳಾಗಿ ಮಾಡಲಿ.

ಒಂದು ಚಿಕ್ಕ ಮರಕ್ಕೆ ಬೇರೆ ಗಿಡಗಳ/ಮರಗಳ ಎಲೆಗಳನ್ನು ಹೂವುಗಳನ್ನು ಅಂಟಿಸಿ ಬುಲ್‌ಬುಲ್‌ಗಳು ವೀಕ್ಷಿಸಲಿ, ಗುರುತಿಸಿ ಬರೆಯಲಿ.

**ಶ್ರವಣದ ಆಟ :**

- 3 ರಿಂದ 4 ಡಬ್ಬಿಗಳಲ್ಲಿ ವಿವಿಧ ವಸ್ತುಗಳನ್ನು ಹಾಕಿ ಮುಚ್ಚಿ ಅಲುಗಾಡಿಸಿ ಬುಲ್‌ಬುಲ್ ಅವುಗಳ ಶಬ್ದ ಗುರುತಿಸಿ ಅದರ ಮೂಲಕ ವಸ್ತು ಹಾಗು ಆ ವಸ್ತುಗಳ ತಯಾರಿಕೆಯಲ್ಲಿ ಬಳಸಿದ ವಸ್ತುಗಳನ್ನು ಹೆಸರಿಸಲಿ.
- ನಿಮ್ಮ ಮೊಬೈಲ್‌ನಲ್ಲಿ ನೀವು ಕೇಳುವ ಕೆಲವು ಸಾಮಾನ್ಯ ಶಬ್ದಗಳು, ನಡಿಗೆ, ಓಟ, ಮಳೆ, ನಲ್ಲಿಯಲ್ಲಿ ನೀರು ಸುರಿಯುವುದು, ಡಬ್ಬದ ಸದ್ದು, ಗುಡಿಸುವ ಸದ್ದು, ಮಿಕ್ಸಿ ಸದ್ದು, ಕುಕ್ಕರ್ ಕೂಗುವ ಸದ್ದು, ಗಡಿಯಾರದ ಟಿಕ್‌ಟಿಕ್ ಸದ್ದು,

ಅಳು–ನಗು, ಪ್ರಾಣಿಗಳ ಕೂಗು, ಇವುಗಳನ್ನು ರೆಕಾರ್ಡ್ ಮಾಡಿಡಿ. ಇವುಗಳನ್ನು ಬುಲ್‌ಬುಲ್‌ಗಳಿಗೆ ಕೇಳಿಸಿ ಶಬ್ದ ಗುರುತಿಸಲು ಹೇಳಿ.

- ಎರಡು ಬುಲ್‌ಬುಲ್‌ಗಳಿಗೆ ಕಣ್ಣುಕಟ್ಟಿ ಒಬ್ಬಳು ಒಂದು ಡಬ್ಬದಲ್ಲಿ ಚಿಕ್ಕ ಕಲ್ಲು ಹಾಕಿ ಹಿಡಿದುಕೊಳ್ಳುವಳು. ಇನ್ನೊಬ್ಬಳು ಮೃದುವಾದ ವಸ್ತು (ದಿಂಬು/ಹುಲ್ಲು ತುಂಬಿದ ಚೀಲ) ಹಿಡಿಯುವಳು. ಸೀಟಿ ಹಾಕಿದ ನಂತರ ಆಟ ಪ್ರಾರಂಭವಾಗುವುದು. ಡಬ್ಬ ಹಿಡಿದವಳು ಸದ್ದು ಮಾಡುತ್ತಾ ಓಡಾಡುವಳು. ಮೃದು ವಸ್ತು ಹಿಡಿದವಳು ಅವಳನ್ನು ಅಟ್ಟಿಸುತ್ತಾ ಮುಟ್ಟಬೇಕು. ವೃತ್ತದಲ್ಲಿ ಆಡಿ.

**ರುಚಿಯ ಆಟ :** ನಾಲ್ಕೈದು ರುಚಿಯ ದ್ರಾವಣ ಲೋಟಗಳಲ್ಲಿ ಮಾಡಿಡಿ. ಪ್ರತಿಯೊಂದರಲ್ಲೂ ಒಂದೊಂದು ಚಮಚ ಹಾಕಿ ಪ್ರತಿ ಬುಲ್‌ಬುಲ್‌ಗಳಿಗೆ ಒಂದು ಚಮಚದಿಂದ ಒಂದೆರಡು ಹನಿ ದ್ರಾವಣ ನಾಲಿಗೆಯ ಮೇಲೆ ಹಾಕಿ ರುಚಿ ಗುರುತಿಸಬೇಕು. ಆ ಚಮಚ ಅವರಲ್ಲೇ ಇಟ್ಟು ಮುಂದಿನ ಲೋಟಕ್ಕೆ ಹೋಗಬೇಕು. ಎಲ್ಲಾ ದ್ರಾವಣಗಳ ರುಚಿ ನೋಡಿದ ಮೇಲೆ ಅವುಗಳಲ್ಲಿನ ವಸ್ತುಗಳನ್ನು ಹೇಳಬೇಕು.

**ಆಘ್ರಾಣಿಸುವುದು (Smelling) :** ಬುಲ್‌ಬುಲ್‌ಗಳಿಗೆ ಕಣ್ಣು ಕಟ್ಟಿ ಹೂವು, ತರಕಾರಿ ಎಲೆಗಳನ್ನು, ಸಾಂಬಾರು ಪದಾರ್ಥಗಳನ್ನು ಮೂಸಿ ನೋಡಲು ಕೊಡಿ. ಅವರು ವಾಸನೆಯಿಂದ ವಸ್ತುವನ್ನು ಗುರುತಿಸಲಿ. ಈ ಆಟದ ಫಲಿತಾಂಶ ಪ್ರತಿ ಬುಲ್‌ಬುಲ್‌ಗಳ ಮುಂದೆ ದಾಖಲಿಸಿರಿ.

## 7. ಹಿಂಡಿನೊಡನೆ ಒಂದು ದಿನ ಹೊರಸಂಚಾರ ಹೋಗುವುದು

**ಉದ್ದೇಶ:** ಪ್ರಕೃತಿ ವೀಕ್ಷಣೆ, .................. ಬುಲ್‌ಬುಲ್ ಕೌಶಲ ಬೆಳೆಸಲು ಪರೀಕ್ಷಿಸುವ ಕಾರ್ಯಕ್ರಮದ ಜೊತೆಗೆ ಸವಾಲೆದರಿಸುವ ಸನ್ನಿವೇಶ ಕಲ್ಪಿಸುವುದು; ಹೊರಸಂಚಾರ ½ ದಿನದ ಅವಧಿ ಇರುತ್ತದೆ. ಹೊರ ಸಂಚಾರ ನಡೆಸಲು ಸಾಧ್ಯವಿರುವಷ್ಟು ದೂರದಲ್ಲಿ ಹಾಕಬೇಕು. ಹೊರಸಂಚಾರ ರಸ್ತೆ, ಕಾಲುರಸ್ತೆ, ಬಣ್ಣದ ಕಾಗದದ ಮೂಲಕ ಮಾರ್ಗಸೂಚಿಸುವುದು ಮತ್ತು ಕಾಡು ಕ್ರಮಿಸುತ್ತಾ ಪ್ರಕೃತಿ ಅಧ್ಯಯನ ಮಾಡುವಂತೆ ಆಯೋಜಿಸಬೇಕು.

**ಅನುಮತಿ:** ಪೊವ್, ವವೂ ಸಭೆ / ಮುಖ್ಯ ಶಿಕ್ಷಕರೆ / ಪೋಷಕರೇ ಸ್ಥಳದ ಯಜಮಾನ ಅನುಮತಿ ಪಡೆಯಬೇಕು.

**ಸ್ಥಳ:** ಪ್ರಕೃತಿ ಪ್ರಧಾನವಾಗಿರಬೇಕು, ನೆರಳಿರಬೇಕು ಮತ್ತು ನೀರಿನ ಅನುಕೂಲತೆ ಇರಬೇಕು.

ಸಲಕರಣೆಗಳು: ವೈಯಕ್ತಿಕ ಸಂಚಿ ಮತ್ತು ಪ್ರಥಮ ಚಿಕಿತ್ಸೆ ಪೆಟ್ಟಿಗೆ ಇರಬೇಕು. ಅಡಿಗೆಗಳ ಪಟ್ಟಿ, ತರಕಾರಿ, ಹಾಲು ಮತ್ತು ಮೊಸರಿನ ವ್ಯವಸ್ಥೆ ಇರಬೇಕು. ಚಟುವಟಿಕೆಗಳ ವೇಳಾಪಟ್ಟಿಗಳ ಪಟ್ಟಿ ಅದಕ್ಕೆ ಬೇಕಾದ ಸಾಧನ ವ್ಯವಸ್ಥೆ ಮಾಡುವುದು. ಹೊರಸಂಚಾರದ ವರದಿ ಅನುಭವಸಹಿತ ಬರೆಸಿ ಛಾಯಾಚಿತ್ರವಿದ್ದರೆ ಅಂಟಿಸಿ.

ಶಿಬಿರವಾಸ ಮಾಡುವುದರಿಂದ ಬುಲ್‌ಬುಲ್‌ಗಳಲ್ಲಿ ಜೀವನ ಕೌಶಲ, ಸಾಮಾನ್ಯಜ್ಞಾನ, ಹೊಂದಾಣಿಕೆ, ಮೌಲ್ಯಗಳು ವೃದ್ಧಿಸುತ್ತವೆ. ತಮ್ಮನ್ನು ತಾವು ನೋಡಿಕೊಳ್ಳುವ ತಮ್ಮ ವಸ್ತುಗಳನ್ನು ಜೋಪಾನ ಮಾಡುವ, ಒಟ್ಟಾಗಿ ಸಂತಸದಿಂದ ಇರುವ, ಜವಾಬ್ದಾರಿ ನಿರ್ವಹಿಸುವ ಮೌಲ್ಯಗಳು ಅನುಭವವಾಗುತ್ತದೆ. ಮುಂದಿನ ಜೀವನ ಎದುರಿಸಲು ಸಿದ್ಧರಾಗುವರು. ಹೀಗೆ ಅವರು ಧೃಡಕಾಯರು, ಧೃಡ ಮನಸ್ಕರು, ಆತ್ಮವಿಶ್ವಾಸವನ್ನು ಉಳ್ಳವರು, ದೂರದೃಷ್ಟಿ ಉಳ್ಳವರು ಹಾಗು ಸ್ವಾವಲಂಬಿಗಳೂ ಆಗುತ್ತಾರೆ. ಒಳ್ಳೆಯ ನಡತೆ ಶಿಷ್ಟಾಚಾರ ಎಲ್ಲೆಡೆ ಇರಬೇಕು. ಶಿಬಿರದಲ್ಲಿ ಇದರ ಅಭ್ಯಾಸವಾಗುತ್ತದೆ.

ಬುಲ್‌ಬುಲ್‌ಗಳ ನಾಯಕಿಗೆ ಶಿಬಿರ ನಡೆಸುವ ಸ್ಥಳದ ಪರಿಚಯ ಇರಬೇಕು. ಅದರ ಪರಿಸರ ತಿಳಿದಿರಬೇಕು. ಸರಿಯಾಗಿ ಸಜ್ಜು ಮಾಡಿಕೊಳ್ಳಬೇಕು. ಉದ್ದೇಶಕ್ಕೆ ತಕ್ಕಂತೆ ಕಾರ್ಯಕ್ರಮ, ಉಟೋಪಹಾರ, ಪ್ರಯಾಣ ಸಲಕರಣೆಗಳು ಉಪಕರಣಗಳು, ಸುರಕ್ಷಿತ ವಾಸಸ್ಥಳ ತುರ್ತು ಪರಿಸ್ಥಿತಿಯಲ್ಲಿ ಆಸ್ಪತ್ರೆ ಮುಂತಾದ ಸೌಕರ್ಯಗಳ ಬಗ್ಗೆ ಖಚಿತ ವ್ಯವಸ್ಥೆ ಮಾಡಿಕೊಂಡು ಹೋಗಬೇಕು.

**ವೈಯಕ್ತಿಕ ಸಂಚಿ (Presonal Kit)**

- ಸಮವಸ್ತ್ರ ಟಾಯಲೆಟ್ ಕಿಟ್ (ಶೌಚ, ಸ್ನಾನ, ಶೃಂಗಾರ ಸಾಧನ)
- ತಟ್ಟೆ, ಲೋಟ, ಮಗ್ಗು, ಲೇಖನ ಸಾಮಗ್ರಿ, ಹಗ್ಗ
- ಟಾರ್ಚ್, ಚಿಕ್ಕ ಚಾಪೆ, ವೈಯಕ್ತಿಕ ಔಷಧಿ ಇದ್ದರೆ, ನೀರಿನ ಬಾಟಲ್ ಇತ್ಯಾದಿ.

ಹಿಂಡಿನ ಕಿಟ್ – ಪ್ರಥಮ ಚಿಕಿತ್ಸೆ ಪೆಟ್ಟಿಗೆ, ಇದ್ದರೆ ಸ್ಥಳೀಯ ನಕ್ಷೆ ಮತ್ತು ಅವಶ್ಯಕ ಸಾಮಾನುಸರಂಜಾಮುಗಳು. ದೈನಿಕ ದಿನಚರಿ, ಚಟುವಟಿಕೆ ವೇಳಾಪಟ್ಟಿ, ನಿಯಮಗಳ ಪಟ್ಟಿ ಶಿಬಿರದ ನಂತರ ಅನುಭವಗಳನ್ನು ಪೌವ್‌ವೌವ್‌ನಲ್ಲಿ ಚರ್ಚಿಸಿ ಇದರ ವರದಿ ನಿಮ್ಮ ಕಾರ್ಯಕ್ರಮದ ಪುಸ್ತಕದಲ್ಲಿ ದಾಖಲಿಸಿ ಛಾಯಾಚಿತ್ರ ತೆಗೆದಿದ್ದರೆ ಅಂಟಿಸಿ.

(ಈ ಕಾರ್ಯಕ್ರಮದಲ್ಲಿ ಭಾಗವಹಿಸುವ ಬುಲ್‌ಬುಲ್‌ಗೆ 8 ವರ್ಷ ತುಂಬಿರಬೇಕು. ಮತ್ತು ಸುವರ್ಣ ಪಂಖ ಹಂತದಲ್ಲಿರಬೇಕು.)

**8. ಕಿರಿಯರಿಗೆ ಸ್ವಚ್ಛತೆ ಅಭ್ಯಾಸ ಕಲಿಯಲು ಸಹಾಯ ಮಾಡಿ**

ಆರೋಗ್ಯವಾಗಿರಬೇಕಾದರೆ ಸ್ವಚ್ಛತೆ ಅವಶ್ಯಕ. ಆರೋಗ್ಯವಾಗಿರಲು ವ್ಯಾಯಾಮ, ಆಹಾರ, ಉಡುಪು, ವಿಶ್ರಾಂತಿ, ಶುದ್ಧಗಾಳಿ, ಶುದ್ಧನೀರು, ಸ್ವಚ್ಛತೆ ಅವಶ್ಯಕ. ಸ್ವಚ್ಛತೆ ಎಂದರೆ ದೇಹ ಸ್ವಚ್ಛತೆ. ಕೂದಲು ಉಗುರಿನ ಹಲ್ಲಿನ ಸ್ವಚ್ಛತೆ ಹಾಗೂ ವಿಸರ್ಜನಾಂಗದ ಸ್ವಚ್ಛತೆ. ಕೆಟ್ಟ ವಿಚಾರ ಬಿಟ್ಟು ಒಳ್ಳೆ ಯೋಚನೆ ಮಾಡುವ ಮನಸ್ಸಿನ ಸ್ವಚ್ಛತೆ, ಮನೆ ಮತ್ತು ಸುತ್ತಲಿನ ಸ್ವಚ್ಛತೆ. ಶಾಲೆಯ ಸ್ವಚ್ಛತೆ. ಈ ಕುರಿತು ಅವಕಾಶ ಸಿಕ್ಕಾಗಲೆಲ್ಲಾ ತಿಳುವಳಿಕೆ ನೀಡಿ. ಹಿರಿಯ ಬುಲ್‌ಬುಲ್‌ಗಳು ಕಿರಿಯರಿಗೆ ಸ್ವಚ್ಛತೆ ಅಭ್ಯಾಸ ಮಾಡಿಸುವರು.

ಕಿರುನಾಟಕ, ಬೊಂಬೆ ಆಟ, ಕಥೆ, ಉದಾಹರಣೆ, ಚಿತ್ರಪ್ರದರ್ಶನದ ಮೂಲಕ ತಿಳಿಸಿ. ಕೊಳೆ ಹೇಗೆ ರೋಗಾಣುಗಳನ್ನು ಬೆಳೆಸಿ ನಮಗೆ ರೋಗ ನೀಡುತ್ತದೆ ತಿಳಿಸಿ. ಈ ಕಾರ್ಯ ಮಾಡಿ ಹಿಂಡಿನ ಸಭೆಯಲ್ಲಿ ವರದಿ ಮಾಡಲಿ ಮತ್ತು ದಾಖಲಿಸಲಿ.

**9. ಕೆಳಗಿನ ಪ್ರಾವೀಣ್ಯತಾ ಪದಕಗಳಲ್ಲಿ ಒಂದನ್ನು ಗಳಿಸಿ**

ಅ) ಮಾರ್ಗದರ್ಶಿ

ಆ) ಮನೆ ವ್ಯವಸ್ಥೆ

ಇ) ವೀಕ್ಷಕಿ

ಈ) ತಂಡ ಆಟಗಾರ್ತಿ

ಉ) ಮನರಂಜಕಿ

ಊ) ಗಣಕಯಂತ್ರ ತಜ್ಞೆ

**10. ಅತಿಥಿಗಳನ್ನು ಸ್ವಾಗತಿಸುವುದನ್ನು ತಿಳಿಯುವುದು :**

ಒಳ್ಳೆಯ ಆತಿಥ್ಯ

- ಬಂದ ತಕ್ಷಣ ಬಾಗಿಲಿಗೆ ಹೋಗಿ ಸ್ವಾಗತ ಕೋರುವುದು.
- ಒಳಗೆ ಕೂರಿಸಿ, ನೀರು ಬೇಕೆ ಕೇಳಿ. ಯೋಗ ಕ್ಷೇಮ ವಿಚಾರಿಸಿ.
- ನಂತರ ಪಾನೀಯ / ಉಪಹಾರ / ಊಟ ನಗುನಗುತಾ ನೀಡಿ.

- ವಿಶೇಷ ಅತಿಥಿಗಳ ಭೇಟಿಯಾದ ನಂತರ ವಂದನಾ ಪತ್ರ / ಶುಭ ಪತ್ರ ಕಳುಹಿಸಿ.
- ತಂಪಾದ ಅಥವಾ ಬಿಸಿಯಾದ ಪಾನೀಯವನ್ನು ಮಾಡಿಕೊಡಿ.
- ವಿಶೇಷ ಸಂದರ್ಭಕ್ಕೆ ಶುಭಪತ್ರವನ್ನು (Greeting Card) ತಯಾರಿಸಿ

**11. ವನಸಂಕೇತಗಳನ್ನು ತಿಳಿದು ಹಾಕಿದ ಸಂಕೇತಗಳನ್ನು ಅನುಸರಿಸಿ ಒಂದು ಕಿಲೋ ಮೀಟರ್ ಹೋಗಿ.**

ನಿಮಗೆ ತಿಳಿದಿರಬೇಕಾದ ಸಂಕೇತಗಳು –

1. ⇨ ಬಾಣದ ತಲೆ ಅನುಸರಿಸಿ

2. ⇨ X ಈ ದಾರಿ ಅನುಸರಿಸಬೇಡಿ/ಅಪಾಯ

3. 10 ⇨ 10 ಹೆಜ್ಜೆ ದೂರದಲ್ಲಿ ಬಾಣದ ತಲೆ ಕಡೆ ಸುದ್ದಿಯನ್ನು ಅಡಗಿಸಿದೆ

4. ಕುಡಿಯುವ ನೀರು

5. ಕೊಳಕು ನೀರು

6. ಮನೆಗೆ ಹೋಗಿದ್ದೇವೆ

ರಸ್ತೆ / ಕಾಲು ರಸ್ತೆ / ಕಾಡು ದಾರಿಯಲ್ಲಿ ಯಾವಾಗಲು ಬಲಗಡೆಗೆ ದಾರಿ ಗುರುತು ಹಾಕಿ. ಸೀಮೇ ಸುಣ್ಣ, ರಂಗೋಲಿಪುಡಿ, ಕಲ್ಲು ಜೋಡಿಸಿ, ಒಣಕಡ್ಡಿ ಜೋಡಿಸಿ ಸಂಕೇತ ಬಿಡಿಸಿ. ಷಟ್ಕಗಳು ಸಾಗುತ್ತಿದ್ದಂತೆ ಈ ಗುರುತು ಬರೆದುಕೊಳ್ಳಿರಿ. ಕೊನೆಯವರು ಇದನ್ನು ಅಳಿಸುತ್ತಾ ಬರಲಿ.

**12. ರಜತ ಪಂಖದ ನಂತರ 8 ಹಿಂಡಿನ ಸಭೆಯಲ್ಲಿ ಭಾಗವಹಿಸಬೇಕು**

**ಸೂಚನೆ:** ಬುಲ್‌ಬುಲ್ ರಜತ್ ಪಂಖ ಪರೀಕ್ಷೆ ಪೂರ್ಣಗೊಳಿಸದ ನಂತರ ಸ್ಥಳೀಯ ಸಂಸ್ಥೆ ಅಥವಾ ಜಿಲ್ಲಾ ಸಂಸ್ಥೆಯ ಪದಕ ಸಮಿತಿ ಬುಲ್‌ಬುಲ್‌ಗಳಿಗೆ ಏರ್ಪಡಿಸಲ್ಪಟ್ಟ ಪರೀಕ್ಷೆ ತರಬೇತಿ ಕಲೆ ಹಗುರದ ಅಥವಾ ಪದಕ ಪರೀಕ್ಷಕರು ಪರೀಕ್ಷೆ ನಡೆದು ಇವರ ಶಿಫಾರಸ್ಸಿನ ಮೇರೆಗೆ ಸುವರ್ಣಪಂಖ್ ಪದಕ ನೀಡಲಾಗುವುದು.

ಸ್ವರ್ಣ ಪದಕದಲ್ಲಿ ನೀಲಿ ಬಟ್ಟೆಯ ಹಿನ್ನೆಲೆಯಲ್ಲಿ ಬಂಗಾರದ ಎರಡು ರೆಕ್ಕೆಗಳ ಮಧ್ಯೆ ಭಾರತ್ ಸ್ಕೌಟ್ ಮತ್ತು ಗೈಡ್ ಹಳದಿ ಬಣ್ಣದ ಲಾಂಛನವಿರುತ್ತದೆ. ಎಡಬಲ ರೆಕ್ಕೆಗಳ ಮೇಲೆ "5" ಮತ್ತು "P" ಎಂಬ ಎರಡು ಅಕ್ಷರವನ್ನು ಮೂಡಿಸಲಾಗುತ್ತದೆ. ಸಮವಸ್ತ್ರದ ಮೇಲೆ ಇರುವ ರಜತಪಂಖ ಪದಕವನ್ನು ತೆಗೆದು ಸ್ವರ್ಣಪಂಖ ಪದಕವನ್ನು ಹೊಲಿಯಬೇಕು.



# 15. ಹೀರಕ್ ಪಂಖ




## 1. ಒಂದು ರಾತ್ರಿ ತಂಗುವ ಹಿಂಡಿನ ರಜೆಯಲ್ಲಿ ಭಾಗವಹಿಸಿರಿ

ಬುಲ್‌ಬುಲ್ ಜೀವನದಲ್ಲಿ ಈ ಕಾರ್ಯಕ್ರಮ ಮಹತ್ವವಾದುದು. ಬುಲ್‌ಬುಲ್‌ಗಳಿಗೆ ಬುದ್ಧಿ ಶಕ್ತಿ ಬೆಳೆಸುವ, ಒಳ್ಳೆಯ ಅಭ್ಯಾಸ ಬೆಳೆಸುವ, ಕೌಶಲ ಬೆಳೆಸುವ ಅವರನ್ನು ಧೈರ್ಯವಂತರನ್ನಾಗಿ ಮಾಡುವ ಮತ್ತು ಗಟ್ಟಿಗರನ್ನಾಗಿ ಮಾಡುವ ಅವಕಾಶ. ಅವರಿಗೆ ಅನುಭವ ವೈಶಾಲ್ಯತೆ ಮತ್ತು ದೂರದೃಷ್ಟಿ ಬೆಳೆಸಿಕೊಳ್ಳಲು ಸಹಾಯವಾಗುವುದು.

ಈ ಹಿಂದೆ ಶಿಬಿರಕ್ಕೆ ಹೋದಂತೆ ಎಲ್ಲಾ ವ್ಯವಸ್ಥೆಗಳನ್ನು ಮಾಡಿಕೊಳ್ಳಬೇಕು.

- ಪವವ್‌ನಲ್ಲಿ ಚರ್ಚೆ.
- ಸ್ಥಳ ಸಂದರ್ಶಿಸುವುದು.
- ಸ್ಥಳದ ಯಜಮಾನರಿಂದ / ಶಾಲೆಯಿಂದ / ಪೋಷಕರಿಂದ ಅನುಮತಿ ಪಡೆಯಬೇಕು.
- ಉದ್ದೇಶಕ್ಕೆ ತಕ್ಕಂತೆ ಕಾರ್ಯಕ್ರಮ ಯೋಜಿಸಬೇಕು.
- ಹಣಕಾಸು, ಪ್ರಯಾಣ, ತಂಗುವ, ಕುಡಿಯುವ ನೀರು, ಸ್ನಾನ, ಶೌಚಾಲಯ, ಹಾಲು-ತರಕಾರಿ ಅಡಿಗೆ ವ್ಯವಸ್ಥೆಯ ಯೋಜನೆಯನ್ನು ಮಾಡಿಕೊಳ್ಳುವುದು.
- ಸುರಕ್ಷತೆಗೆ ಗಮನ ನೀಡಿ.
- ಜೊತೆಗೆ ಸ್ನೇಹಿತರನ್ನೋ ಪೋಷಕರನ್ನೋ ಸಹಾಯಕ್ಕೆ ಕರೆದುಕೊಂಡು ಹೋಗಿ.
- ಮಕ್ಕಳಿಗೆ ವೈಯಕ್ತಿಕ ಸಾಮಾನಿನ ಪಟ್ಟಿ ನೀಡಿ.
- ಶಿಬಿರದ ಸಾಮಾನಿನ ಪಟ್ಟಿ ತಯಾರಿಸಿ. ಎಲ್ಲವನ್ನೂ ತೆಗೆದುಕೊಂಡು ಹೋಗಿ.

ಹಿಂಡಿನ ನಾಯಕಿ ಆಗಿ ಜವಾಬ್ದಾರಿ ನಿರ್ವಹಿಸುವ ಜೊತೆಗೆ ಮನೆಯ ಅಗಲಿಕೆಯ ವ್ಯಸನ ದೂರ ಮಾಡಲು ತಾಯಿಯ ಮಮತೆ ನೀಡಿ.

8 ವರ್ಷ ತುಂಬಿರುವ ಸುವರ್ಣ ಪಂಖಕ್ಕೆ ಕೆಲಸ ಮಾಡುತ್ತಿರುವ ಮಕ್ಕಳು ಮಾತ್ರ ಈ ಕಾರ್ಯಕ್ರಮದಲ್ಲಿ ಭಾಗವಹಿಸಬೇಕು.

**2. ಹಿಂಡಿನ ಅನ್ವೇಷಣೆಯಲ್ಲಿ ಭಾಗವಹಿಸುವುದು**

ಹಿಂಡಿನ ಅನ್ವೇಷಣೆಗೂ ಪೌವ್‌ವವ್ ಅನುಮತಿ ಬೇಕು. ಶಾಲೆಯ ಹಿರಿಯರ ಅನುಮತಿ ಬೇಕು. ಮತ್ತೆಲ್ಲಾ ಸಿದ್ಧತೆ ಮಾಡಿಕೊಳ್ಳಬೇಕು. ನಿಮ್ಮ ಅನ್ವೇಷಣೆಯ ಉದ್ದೇಶವೇನು? ನಿರ್ಧರಿಸಿ.

ಸಸ್ಯ ವೀಕ್ಷಣೆ, ಪಕ್ಷಿ ವೀಕ್ಷಣೆ, ಔಷಧ ಸಸ್ಯ ಪರಿಚಯ, ಕಾಡಿನ ಪರಿಚಯ, ಚಿಕ್ಕ ಗುಡ್ಡ ಬೆಟ್ಟಗಳನ್ನು ಏರುವುದು, ನದಿ ತೀರ, ಕೊಳದ ಪರಿಸರ, ಮಾರುಕಟ್ಟೆ, ಕೀಟಗಳ ಅಧ್ಯಯನ, ಕಸ ವಿಲೇವಾರಿ. ಹೀಗೆ ಏನನ್ನಾದರೂ ಅನ್ವೇಷಿಸಬಹುದು.

ಇದು ಬುಲ್‌ಬುಲ್‌ಗಳ ಕುತೂಹಲ ಚಟುವಟಿಕೆಯಾಗಿರಬೇಕು. ಸ್ವತಂತ್ರವಾಗಿ ಮಾಡಲು ಅವಕಾಶ ನೀಡಬೇಕು. ವೀಕ್ಷಣೆ ಅಧ್ಯಯನ ಕಲಿಕೆ ಸತತವಾಗಿ ಈ ಕಾರ್ಯಕ್ರಮದಲ್ಲಿ ನಡೆಯುತ್ತದೆ. ಕೆಲವು ವಸ್ತುಗಳನ್ನು ಸಂಗ್ರಹಿಸಬಹುದು. ಪುಕ್ಕ, ವಿಶೇಷ ಕಲ್ಲು, ಎಲೆ, ಕಾಯಿ, ಇತ್ಯಾದಿ. ಇದನ್ನು ಸಂರಕ್ಷಿಸುವುದನ್ನೂ ಕಲಿಸುವುದು. ಯಾವಾಗಲು ಕಣ್ಣು ಕಿವಿ ತೆರೆದಿಟ್ಟು ಹೊಸ ವಿಷಯಗಳನ್ನು ಕಲಿಯಲು ಪ್ರೋತ್ಸಾಹಿಸಿ.

3. Tie and know the use of bowline, round turn and two half hitches. ಬೊಲೈನ್ ಮತ್ತು ಒಂದು ಸುತ್ತು ಎರಡು ಅರಗಂಟುಗಳನ್ನು ಕಟ್ಟುವುದನ್ನು ಕಲಿತು ಉಪಯೋಗಿಸುವುದು.

**4. ಅಂಚೆ ಕಚೇರಿ ಅಥವಾ ಬ್ಯಾಂಕ್‌ನಲ್ಲಿ ಸಣ್ಣ ಉಳಿತಾಯ ಮಾಡಿ. ಅಥವಾ ನೀವು ಬಡಾವಣೆಯಲ್ಲಿ ಎರಡು ಮರಗಳ ಸಸಿ ಬೆಳೆಸಿ 6 ತಿಂಗಳು ಅವುಗಳನ್ನು ಕಾಪಾಡಿ.**

ಬುಲ್‌ಬುಲ್‌ಗಳಿಗೆ ಉಳಿತಾಯ ಮಾಡಲು ಪ್ರೋತ್ಸಾಹಿಸಿ. ಪೋಷಕರ ಗಮನಕ್ಕೆ ತಂದು ಖಾತೆ ತೆಗೆಯಲು ವ್ಯವಸ್ಥೆ ಮಾಡಿ.

ಇವಲ್ಲದೇ ನಿಮ್ಮ ಸುತ್ತಲಿನಲ್ಲಿ ಜಾಗ ಗೊತ್ತು ಪಡಿಸಿಕೊಂಡು ಹಣ್ಣು/ ಹೂವಿನ/ಯಾವುದಾದರೂ ದೊಡ್ಡ ನೆರಳ ಮರ. ನೀವು ಆಯ್ಕೆ ಮಾಡಿದ ಸ್ಥಳಕ್ಕೆ

ಸಂಬಂಧಿಸಿದ ಅಧಿಕಾರಿಗಳಿಂದ ಅನುಮತಿ ಪಡೆಯಿರಿ. ಅರಣ್ಯ ಇಲಾಖೆಯಿಂದ ಒಳ್ಳೆಯ ಸಸಿಗಳನ್ನು ತನ್ನಿ. ಅಳತೆ ಮಾಡಿ ಸಸಿ ನೆಟ್ಟು ಗೊಬ್ಬರ ಮಣ್ಣು ಹಾಕಿ. ನೀರು ಹಾಕಿ ಬೆಳೆಸಿ. ಪ್ರಾಣಿಗಳು ಸಸ್ಯವನ್ನು ತಿನ್ನದಂತೆ ಸುತ್ತಲೂ ಬೇಲಿ ಕಟ್ಟಿ.

**5. ಧಾರ್ಮಿಕ ಹಬ್ಬಗಳಲ್ಲಿ ಭಾಗವಹಿಸಿ ಹಿಂಡಿನ ನಾಯಕಿಗೆ ನಿಮ್ಮ ಅನುಭವಗಳನ್ನು ಹೇಳಿ**

**6. ಕನಿಷ್ಠ 8 ಸಭೆಗೆ ಹಾಜರಾಗಿ ಹೀರಕ್ ಪಂಖ್ ಅರ್ಹತೆ ಪಡೆಯಿರಿ**

**ಪ್ರಾವೀಣ್ಯತಾ ಪದಕಗಳು**

ಪ್ರಾವೀಣ್ಯತಾ ಪದಕಗಳು ವ್ಯಾಪಕ ತಿಳುವಳಿಕೆ ಮತ್ತು ಅನುಭವಗಳನ್ನು ನೀಡುತ್ತದೆ. ಇದನ್ನು ಗೈಡಿಂಗ್‌ನ 4 ಆಧಾರಾಂಶಗಳಾದ (Signposts) ಚಾರಿತ್ರ್ಯ, ಆರೋಗ್ಯ, ಕರಕೌಶಲ ಮತ್ತು ಸೇವೆಯನ್ನು ಒಳಗೊಂಡಂತೆ ಪದಕಗಳನ್ನು ನೀಡಲಾಗಿದೆ. ಪ್ರತಿ ಪ್ರಾವೀಣ್ಯತಾ ಪದಕಕ್ಕೂ ನಿರ್ದಿಷ್ಟ ಉದ್ದೇಶಗಳಿವೆ.

ಒಟ್ಟು 18 ಪ್ರಾವೀಣ್ಯತಾ ಪದಕಗಳಿಗೆ ಹಿಂಡಿನ ಸಭೆ ನಡೆಯುವಾಗ ಪ್ರಾವೀಣ್ಯತಾ ಪದಕ ಕಾರ್ಯ ಮಾಡಲು ಪ್ರೇರಣೆ ನೀಡಲಾಗುವುದು. ಹಿಂಡಿನ ನಾಯಕಿ ಪ್ರತಿ ಪದಕಕ್ಕೂ ಹೇಗೆ ಗಳಿಸಬೇಕೆಂದು ವಿವರಣೆ ನೀಡಬೇಕು.

ಪ್ರಾವೀಣ್ಯತಾ ಪದಕಗಳಿಂದ ಆತ್ಮವಿಶ್ವಾಸ ಬೆಳೆಯುತ್ತದೆ. ಒಳ್ಳೆಯ ಹವ್ಯಾಸ ಮತ್ತು ಅಭ್ಯಾಸ ಬೆಳೆಯುತ್ತದೆ. ಇದು ಅವರ ಚಾರಿತ್ರ್ಯ, ಆರೋಗ್ಯ, ಕರಕೌಶಲ, ಬುದ್ಧಿಶಕ್ತಿ ಹಾಗೂ ಸಾಮಾನ್ಯ ಅರಿವು ಮೂಡಿಸಲು ಸಹಾಯವಾಗುತ್ತದೆ.

ಸರಿಯಾದ ಮಾರ್ಗದಲ್ಲಿ ಪ್ರಗತಿ ಪರವಾಗಿ ಅಭಿವೃದ್ಧಿ ಹೊಂದಲು ಪ್ರತಿ ಬುಲ್‌ಬುಲ್ ವೈಯಕ್ತಿಕವಾಗಿ ಪ್ರಾವೀಣ್ಯತಾ ಪದಕ ಕಾರ್ಯ ಮಾಡಬೇಕು. ಇದು ಅವಳ ಪ್ರತಿಜ್ಞೆಯನ್ನು ಪೂರೈಸಲು ವಿನೋದದಿಂದ ಕೂಡಿದ ಹೊಸ ವಿಷಯಗಳನ್ನು ತಿಳಿದುಕೊಳ್ಳುವ ಕಲಿಕೆಯಾಗುತ್ತದೆ. ಆದ್ದರಿಂದ ಈ ಕಾರ್ಯವನ್ನು ಮಾಡಿಸುವಾಗ ಹಾಗೂ ಪರೀಕ್ಷಿಸುವಾಗ ಆಸಕ್ತಿಪೂರ್ಣ ಪ್ರತ್ಯಕ್ಷ ಹಾಗೂ ನೈಜವಾಗಿರಬೇಕು.

ಪದಕ ಕಾರ್ಯ ಸಾಧನೆಯ ಸೋಪಾನವಾಗುತ್ತದೆ. ಇದು ಮಕ್ಕಳಿಗೆ ಪ್ರಿಯವಾದ ಕಾರ್ಯ. ಬೆಂಕಿ ಹತ್ತಿಸುವ, ಅಡಿಗೆ ಮಾಡುವ ಅನುಭವಗಳು ಹಿರಿಯಕ್ಕಂದಿರ ಚಟುವಟಿಕೆಗಳನ್ನು ಮಾಡಲು ಅವಕಾಶ ನೀಡುತ್ತದೆ.

ಬುಲ್‌ಬುಲ್‌ಗಳು ನಾಚಿಕೆ ಹಿಂಜರಿಕೆಯಿಂದ ಹೊರಬಂದು ಧೈರ್ಯವಾಗಿ ಚುರುಕಾಗಿ ಲವಲವಿಕೆಯಿಂದ ಕಾರ್ಯ ನಿರ್ವಹಿಸಲು ಪದಕಕಾರ್ಯಗಳು ಅನುಕೂಲವಾಗುತ್ತದೆ. ಇದರ ಯೋಜನೆಯನ್ನು ಸಮರ್ಥವಾಗಿ ಮಾಡುವುದರಿಂದ ಪ್ರತಿ ಬುಲ್‌ಬುಲ್ ಪಾಲ್ಗೊಳ್ಳಲು ಸಮರ್ಥವಾಗುತ್ತಾಳೆ. ಬುಲ್‌ಬುಲ್‌ಳ ಬುದ್ಧಿಶಕ್ತಿ ಬೆಳೆಯುತ್ತದೆ.

ಪ್ರಾವೀಣ್ಯತಾ ಪದಕದ ಬಗ್ಗೆ ಹಿಂಡಿನ ನಾಯಕಿ ಮತ್ತು ಬುಲ್‌ಬುಲ್‌ಗಳ ಮನೋಭಾವ ಭಿನ್ನವಾಗಿರುತ್ತದೆ. ಹಿಂಡಿನ ನಾಯಕಿ ಪದಕ ಕಾರ್ಯದ ಹಿನ್ನೆಲೆಯಲ್ಲಿ ಬುಲ್‌ಬುಲ್‌ಳ ಕಾರ್ಯವನ್ನು ಚಾರಿತ್ರ್ಯ, ಸ್ವಚ್ಛತೆ, ಶಿಸ್ತು, ಮಿತವ್ಯಯ ಹಾಗೂ ಪ್ರಯತ್ನದಲ್ಲಿ ಪ್ರಾಮಾಣಿಕತೆ ಮುಂತಾದುವನ್ನು ವೀಕ್ಷಿಸುವರು. ಬುಲ್‌ಬುಲ್‌ಗಳು ಒಳ್ಳೆಯ ಗುಣಮಟ್ಟ ಕಾಪಾಡಿಕೊಳ್ಳಲು ಪ್ರಯತ್ನಿಸುವರು ಮತ್ತು ತಮ್ಮ ಕಾರ್ಯದ ಬಗ್ಗೆ ಸಂತೋಷ ಮತ್ತು ಸಂತೃಪ್ತಿ ಪಡೆಯುವರು.

ಬುಲ್‌ಬುಲ್‌ಗಳ ಸರ್ವತೋಮುಖ ಬೆಳವಣಿಗೆಗಾಗಿ ಬೇಡನ್ ಪಾವೆಲ್ಲರು ಪ್ರಾವೀಣ್ಯತಾ ಪದಕಗಳನ್ನು ಅಳವಡಿಸಿದರು. ಬುಲ್‌ಬುಲ್‌ಗಳಿಗೆ ಕಲಿಸುವಾಗ ಮತ್ತು ಪರೀಕ್ಷಿಸುವಾಗ ನಾಯಕಿ ಸಾಕಷ್ಟು ಕಲ್ಪನೆ ಮತ್ತು ಸೃಜನಶೀಲತೆಯನ್ನು ಬಳಸಬೇಕು. ಪದಕ ಕಾರ್ಯವನ್ನು ವಿವರವಾಗಿ ಸ್ಪಷ್ಟವಾಗಿ ಮಾಡಿಸಬೇಕು. ಬುಲ್‌ಬುಲ್‌ಗಳ ಅನೇಕ ಕಾರ್ಯಕ್ರಮಗಳನ್ನು ಆಟ, ಕಥೆ, ಪ್ರದರ್ಶನ, ಕರಕೌಶಲಗಳನ್ನು ಬಳಸಿ ಮಾಡಿಸಬೇಕು. ಬುಲ್‌ಬುಲ್‌ಗಳನ್ನು ವೈಯಕ್ತಿಕವಾಗಿ ಗಮನಿಸುತ್ತಾ ಪ್ರತಿಯೊಬ್ಬರು ಶ್ರೇಷ್ಠ ಮಟ್ಟವನ್ನು ಪಡೆಯುವಂತೆ ಮಾಡಬೇಕು.

ಆಕರ್ಷಕವಾಗಿ, ವರ್ಣರಂಜಿತವಾಗಿ ಸೂಚನಾ ಫಲಕದ ಮೇಲೆ ಪ್ರಾವೀಣ್ಯತಾ ಪದಕಗಳನ್ನು ಪ್ರದರ್ಶಿಸಬೇಕು. ಇದು ಪೋಷಕರು ಮತ್ತು ಸಂದರ್ಶಕರ ಗಮನ ಸೆಳೆಯುತ್ತದೆ. ಬುಲ್‌ಬುಲ್‌ಗಳಿಗೆ ಪ್ರೇರಣೆ ನೀಡುತ್ತದೆ. 21 ಪ್ರಾವೀಣ್ಯತಾ ಪದಕಗಳಿವೆ. ಇವುಗಳನ್ನು 5 ಗುಂಪುಗಳಾಗಿ ವಿಂಗಡಿಸಿದೆ.

**1. ಗುಂಪು – ಚಾರಿತ್ರ್ಯ (Character)**

**ಅ. ಸಂಗ್ರಹಕಿ – Collector**

**ಆ. ಮನೋರಂಜಕಿ – Entertainer**

**ಇ. ತೋಟಗಾರ್ತಿ – Gardener**

**ಈ. ವೀಕ್ಷಕಿ – Observer**

**ಉ. ಕಥೆ ಹೇಳುವವರು – Story Teller**

**ಊ. ನನ್ನ ಮುಕ್ತ ಇರುವಿಕೆ – Free Being me**

ಪದಕದ ಬಣ್ಣ ಖಾಕಿ. ಇದರ ಅಂಚು ಮತ್ತು ಒಳಗಿನ ಚಿತ್ರವು ನೀಲಿಯ ಬಣ್ಣದ್ದಾಗಿರುತ್ತದೆ.

**2. ಗುಂಪು – ಆರೋಗ್ಯ (Health)**

**ಅ. ಕ್ರೀಡಾಪಟು – Athlete**

**ಆ. ಸೈಕಲ್ ಸವಾರಿಕಿ – Cyclist**

**ಇ. ಈಜುಗಾರ್ತಿ – Swimmer**

**ಈ. ತಂಡದ ಆಟಗಾರ್ತಿ – Team Player**

ಪದಕದ ಬಣ್ಣ ಖಾಕಿ. ಇದರ ಅಂಚು ಮತ್ತು ಒಳಗಿನ ಚಿತ್ರವು ಹಸಿರು ಬಣ್ಣದ್ದಾಗಿರುತ್ತದೆ.

**3. ಗುಂಪು – ಕರಕೌಶಲ (Handicraft)**

**ಅ. ಚಿತ್ರಕಲಾ ಕುಶಲಿ – Artist**

**ಆ. ಗೃಹ ಕುಶಲಿ – Home Craft**

**ಇ. ಕಸೂತಿ ಚತುರೆ – Needle Worker**

**ಈ. ಆಟಿಕೆ ತಯಾರಕಿ – Toy Maker**

ಪದಕದ ಬಣ್ಣವು ಖಾಕಿಯಾಗಿರುತ್ತದೆ. ಇದರ ಅಂಚು ಮತ್ತು ಒಳಗಿನ ಚಿತ್ರವು ಹಳದಿ ಬಣ್ಣದ್ದಾಗಿರುತ್ತದೆ.

**4. ಗುಂಪು – ಸೇವೆ (Service)**

**ಅ. ಬಾಣಸಿ – Cook**

**ಆ. ಪ್ರಥಮ ಚಿಕಿತ್ಸಕಿ – First Aider**

**ಇ. ಮಾರ್ಗದರ್ಶಿ – Guide**

**ಈ. ಗೃಹ ಶಿಸ್ತು – House Orderly**

ಪದಕದ ಬಣ್ಣವು ಖಾಕಿ. ಇದರ ಅಂಚು ಮತ್ತು ಒಳಗಿನ ಚಿತ್ರವು ಕೆಂಪು ಬಣ್ಣದ್ದಾಗಿರುತ್ತದೆ.

**5. ಗುಂಪು – ಸಂರಕ್ಷರಣೆ (Conservation)**

**ಅ. ವಿಶ್ವ ಸಂರಕ್ಷಣೆ – World Conservation**

**ಆ. ಪರಂಪರೆ – Heritage**

**ಇ. ಬೊಲೈನ್ ಮತ್ತು ಒಂದು ಸುತ್ತು ಎರಡು ಅರೆಗಂಟು (ಮಲಕು) ಹಾಕುವುದನ್ನು ಕಲಿತು ಉಪಯೋಗಿಸಿ**

**6. ಈ ಕೆಳಗಿನ ಯಾವುದಾದರೂ ಒಂದು ಮೊದಲು ಗಳಿಸದೇ ಇರುವ ಪ್ರಾವೀಣ್ಯತಾ ಪದಕವನ್ನು ಗಳಿಸಿ**

1. ವಿಶ್ವ ಸಂರಕ್ಷಣೆ
2. ಪ್ರಥಮ ಚಿಕಿತ್ಸಕಿ
3. ಸೈಕಲ್ ಸವಾರಕಿ
4. ತೋಟಗಾರ್ತಿ
5. ರಟ್ಟು ಕಟ್ಟುವುದು
6. ಪರಂಪರೆ
7. ನನ್ನ ಮುಕ್ತ ಇರುವಿಕೆ

7) ಒಂದು ತಿಂಗಳು ಬುಲ್‌ಬುಲ್ ತನ್ನ ಪರಿಸರದಲ್ಲಿ ನಡೆಯುವ ಗೈಡ್ ಅಷ್ಟಕ ಅಥವಾ ದಳದ ಸಭೆಯನ್ನು ಅದರ ಕಾರ್ಯಕ್ರಮಗಳನ್ನು ಗಮನಿಸಿ ತನ್ನ ಅಭಿಪ್ರಾಯ ಮತ್ತು ಅನುಭವಗಳನ್ನು ಹಿಂಡಿನ ನಾಯಕಿಯವರೊಡನೆ ಚರ್ಚಿಸುವುದು.

ಅಥವಾ

ನಿನ್ನ ಪರಿಸರದಲ್ಲಿ 5 ಗೈಡ್ಸ್‌ಗಳ ವಿಳಾಸವನ್ನು ಸಂಗ್ರಹಿಸಿ ನಿನ್ನ ಹಿಂಡಿನ ನಾಯಕಿಗೆ ಸಲ್ಲಿಸುವುದು.

8. ಇಬ್ಬರು ರಾಷ್ಟ್ರೀಯ ನಾಯಕಿಯ ಅಥವಾ ಸ್ವಾತಂತ್ರ್ಯ ಹೋರಾಟಗಾರರ ಬಗ್ಗೆ ಹೇಳಲು ಸಮರ್ಥರಾಗಿರುವುದು.
9. ರಾಷ್ಟ್ರಧ್ವಜ ಮತ್ತು ಭಾರತ ಸ್ಕೌಟ್ ಗೈಡ್ ಧ್ವಜದ ಬಗ್ಗೆ ತಿಳಿಯುವುದು.

10. ಸರಳ ಯೋಗಾಸನಗಳನ್ನು ಅಭ್ಯಾಸ ಮಾಡಿ ಪ್ರತಿದಿನವೂ ಕಲಿತಿರುವ ಆಸನಗಳನ್ನು ಮಾಡಿ.

11. ತಾರಾಳಿಂದ ಎರಡು ಒಳ್ಳೆಯ ಅಭ್ಯಾಸಗಳನ್ನು ಅರಿತು ಪ್ರತಿದಿನವೂ ಅಭ್ಯಾಸ ಮಾಡುವುದು.

12. ಸಾಕು ಪಕ್ಷಿ ಅಥವಾ ಪ್ರಾಣಿಗಳನ್ನು ವೀಕ್ಷಿಸಿ 3 ತಿಂಗಳು ಅವುಗಳ ಪಾಲನೆ ಮಾಡಿ.

13ಎ. ಸುವರ್ಣ ಪಂಖ ಪಡೆದ ನಂತರ ಕನಿಷ್ಟ ಪಕ್ಷ 8 ಹಿಂಡಿನ ಸಭೆಗಳಲ್ಲಿ ಭಾಗವಹಿಸಿ.

**ಸೂಚನೆ:** ಪರೀಕ್ಷಾಂಶಗಳನ್ನು ಪೂರ್ಣಗೊಳಿಸಿದ ಮೇಲೆ ಸುವರ್ಣ ಪಂಖ ಬುಲ್‌ಬುಲ್‌ಗಳಿಗೆ ಸ್ಥಳೀಯ ಅಥವಾ ಜಿಲ್ಲಾ ಸಂಸ್ಥೆ ನೇಮಕ ಮಾಡಿದ ಆಪ್ತ ಸಲಹೆಗಾರರು ಅಥವಾ ಪರೀಕ್ಷಕರ ಶಿಪಾರಸ್ಸಿನ ಮೇರೆಗೆ ಹೀರಕ್‌ಪಂಖ ಪದಕವನ್ನು ಕೊಡಲಾಗುವುದು.

ಬಿ. ಈ ಪದಕದಲ್ಲಿ ನೀಲಿ ಬಟ್ಟೆಯ ಹಿನ್ನೆಲೆಯಲ್ಲಿ ರೂಬಿ ಬಣ್ಣದ ಎರಡು ರೆಕ್ಕೆಗಳ ಮಧ್ಯ ಭಾರತ್ ಸ್ಕೌಟ್ ಮತ್ತು ಗೈಡ್ ಲಾಂಛನವಿರುತ್ತದೆ. ಎಡ ಬಲ ರೆಕ್ಕೆಗಳ ಮೇಲೆ ಹೆಚ್ ಮತ್ತು ಪಿ ಎಂಬ ಅಕ್ಷರವನ್ನು ಮೂಡಿಸಲಾಗಿರುತ್ತದೆ. ಸಮವಸ್ತ್ರದ ಮೇಲೆ ಇರುವ ಸುವರ್ಣಪಂಖ ಪದಕವನ್ನು ತೆಗೆದು ಹೀರಕ್ ಪಂಖ್ ಪದಕವನ್ನು ಹೊಲಿಯಬೇಕು. ಹೀರಕ್ ಪಂಖ್ ಪಡೆದ ಬುಲ್‌ಬುಲ್‌ಗಳಿಗೆ ರಾಜ್ಯ ಸಂಸ್ಥೆಯು ರಾಜ್ಯ ಪ್ರಧಾನ ಆಯುಕ್ತರು ಸಹಿ ಮಾಡಿದ ಪ್ರಮಾಣಪತ್ರ ಮತ್ತು ಪದಕವನ್ನು ನೀಡುತ್ತದೆ.



## 17. ಬಂಗಾರದ ಬಾಣ (Golden Arrow)

ಹೀರಕ್‌ಪಂಖ್ ಬುಲ್‌ಬುಲ್ 6 ಪ್ರಾವೀಣ್ಯತಾ ಪದಕಗಳನ್ನು ಗಳಿಸಬೇಕು. ಒಂದು ಪದಕ ಸ್ವರ್ಣಪಂಖ್‌ನಲ್ಲಿ ಮತ್ತೊಂದು ಪದಕ ಹೀರಕ್‌ಪಂಖ್‌ನಲ್ಲಿ ಗಳಿಸಿ ಉಳಿದ ನಾಲ್ಕು ಪ್ರಾವೀಣ್ಯತಾ ಪದಕಗಳ ಗುಂಪಿನಿಂದ ಹಿಂದೆ ಗಳಿಸದೇ ಇರುವ ಪದಕವನ್ನು ಗಳಿಸಬೇಕು. ಹತ್ತು ವರ್ಷ ತುಂಬುವ ಮುನ್ನ 6 ಪದಕ ಗಳಿಸಿದರೆ ಬಂಗಾರದ ಬಾಣ ನೀಡಲಾಗುವುದು.

a) ಪದಕವು ನೀಲಿ ಹಿನ್ನೆಲೆ ಹೊಂದಿದ್ದು ಬಂಗಾರದ ಬಣ್ಣದ ಅಂಚು ಮಧ್ಯೆ ಬಂಗಾರ ಬಣ್ಣದ ಸ್ಕೌಟ್-ಗೈಡ್ ಲಾಂಛನ ಮತ್ತು ಅದರ ಕೆಳಗೆ ಬಂಗಾರದ ಬಣ್ಣದ ಬಾಣದ ಚಿತ್ರವಿರುತ್ತದೆ. ಪದಕವನ್ನು ಬಲ ಜೇಬಿನ ಮೇಲೆ ಧರಿಸುವುದು. ಈ ಪದಕ ಪಡೆದವರಿಗೆ ಪ್ರಧಾನ ರಾಷ್ಟ್ರೀಯ ಆಯುಕ್ತ ಸಹಿ ಮಾಡಿದ ಪ್ರಮಾಣ ಪತ್ರವನ್ನು ಭಾರತದ ರಾಷ್ಟ್ರಪತಿ ನೀಡುವರು.

b) ರಾಜ್ಯ ಪ್ರಧಾನ ಆಯುಕ್ತರ ಶಿಫಾರಸ್ಸಿನ ಮೇರೆಗೆ ಪದಕ ನೀಡಲಾಗುವುದು. ಈ ಪದಕವನ್ನು ನೀಡುವ ಅಂತಿಮ ಅಧಿಕಾರವನ್ನು ರಾಜ್ಯ ಪ್ರಧಾನ ಆಯುಕ್ತರು ಪಡೆದಿರುವರು.

c) ಪ್ರಧಾನ ರಾಷ್ಟ್ರ ಆಯುಕ್ತರು ಕಾಲ ಕಾಲಕ್ಕೆ ಬಂಗಾರದ ಬಾಣದ ಬಗ್ಗೆ ಸೂಚನೆ ನೀಡುವರು.

d) ರಾಜ್ಯ ಸಂಘಟನಾ ಆಯುಕ್ತರು ರಾಜ್ಯ ಮಟ್ಟದಲ್ಲಿ ಬಂಗಾರದ ಬಾಣ ಪರೀಕ್ಷಾ ಶಿಬಿರವನ್ನು ಆಯೋಜಿಸುವರು.

e) ಪಡೆದಿರುವ ಮತ್ತು ಸನ್ನದನ್ನು ಹೊಂದಿರುವ ಫ್ಲಾಕ್ ಲೀಡರ್ ಬಂಗಾರ ಬಾಣ ಬುಲ್‌ಬುಲ್ಸ್ ಅನ್ನು ತಯಾರು ಮಾಡಲು ಅರ್ಹರಾಗಿರುವರು.

f) ಸ್ಥಳೀಯ ಅಥವಾ ಜಿಲ್ಲಾ ಪದಕ ಸಮಿತಿಯಿಂದ ನೇಮಿಸಲ್ಪಟ್ಟ ಸ್ವತಂತ್ರ ಪರೀಕ್ಷಕರಿಂದ ಪ್ರಾವೀಣ್ಯತಾ ಪದಕಗಳ ಪರೀಕ್ಷೆಯನ್ನು ಮಾಡಿಸತಕ್ಕದ್ದು ಮತ್ತು ವಿವರಗಳನ್ನು ರಾಷ್ಟ್ರ ಸಂಸ್ಥೆಯ ಅಧಿಕೃತ ನಮೂನೆಯಲ್ಲಿ ತುಂಬಿಕೊಡತಕ್ಕದ್ದು.

g) ಹಿಂಡಿನ ನಾಯಕಿ ತಮ್ಮ ಹಿಂಡಿಗೆ ಪರೀಕ್ಷಕರಾಗಲು ಸಾಧ್ಯವಿಲ್ಲ!

h) ಆರು (6) ಪದಕ ಗಳಿಸಿರುವ 10 ವರ್ಷ ತುಂಬದೇ ಇರುವ ಬುಲ್‌ಬುಲ್‌ಗಳು ಪ್ರಾಂತೀಯ ಕಛೇರಿಗೆ (Regional Office) ನೋಂದಣಿ ಅರ್ಜಿಯನ್ನು ಸಲ್ಲಿಸತಕ್ಕದ್ದು.

i) ಹಿಂಡಿನ ನಾಯಕಿ ಅರ್ಹ ಬುಲ್‌ಬುಲ್‌ಗಳನ್ನು ಶಿಫಾರಸ್ಸು ಮಾಡಲು ಸಂಖ್ಯಾಮಿತಿ ಇಲ್ಲ.

**ಬುಲ್‌ಬುಲ್ಸ್ ಶಿಬಿರ**

i. 7 ವರ್ಷ ತುಂಬಿದ, ಕೋಮಲ್ ಪಂಖ್ ಪದಕ ಪಡೆದಿರುವ ಬುಲ್‌ಬುಲ್ ಶಿಬಿರ ವಾಸಕ್ಕೆ ಅರ್ಹಳಾಗಿರುತ್ತಾಳೆ.

ii. ಬುಲ್‌ಬುಲ್ಸ್ ಶಿಬಿರ ಎರಡು ರಾತ್ರಿ ತಂಗುವುದಕ್ಕಿಂತ ಹೆಚ್ಚಾಗಿರಬಾರದು.

iii. ಸುರಕ್ಷಿತವಾದ ಕಟ್ಟಡಗಳಲ್ಲಿ ಅಥವಾ ಗುಡಾರಗಳಲ್ಲಿ ಶಿಬಿರವಾಸ ಏರ್ಪಡಿಸಬೇಕು

iv. ಬುಲ್‌ಬುಲ್ಸ್ ಶಿಬಿರವನ್ನು ರಾಜ್ಯದಿಂದ ಹೊರಗೆ ನಡೆಸುವಾಗ ರಾಜ್ಯ ಆಯುಕ್ತೆ (ಗೈ)ಯ ಲಿಖಿತ ಅನುಮತಿ ಪಡೆಯುವುದು.

v. ಜಿಲ್ಲಾ ಸಂಘಟನಾ ಆಯುಕ್ತರು ಫ್ಲಾಕ್ ಲೀಡರ್‌ಗೆ ಶಿಬಿರವಾಸ, ಚಾರಣ ಅಥವಾ ಹೊರ ಸಂಚಾರ ಏರ್ಪಡಿಸಲು ಸುರಕ್ಷತೆಯ ಖಾತ್ರಿಗಾಗಿ ಪರವಾನಗಿ ನೀಡುವರು.

vi. ಶಿಬಿರದಲ್ಲಿ ಕನಿಷ್ಠ 2 ಫ್ಲಾಕ್ ಲೀಡರ್ ಇರಲೇಬೇಕು. ಅವಕಾಶವಿದ್ದಲ್ಲಿ ಒಂದು ಷಟ್ಕಕ್ಕೆ ಒಬ್ಬರಂತೆ ಹಿಂಡಿನನಾಯಕಿ ಇರಬಹುದು.

vii. ಜಿಲ್ಲಾ ಆಯುಕ್ತರ ಅನುಮತಿ ಇಲ್ಲದೆ ಹಿಂಡಿನ ನಾಯಕಿ / ಸಹನಾಯಕಿ ಶಿಬಿರವನ್ನು ಏರ್ಪಡಿಸುವಂತಿಲ್ಲ.

## ಪ್ರಾವೀಣ್ಯತಾ ಪದಕದ ಅವಶ್ಯಕತೆಗಳು

### 1. ಗುಂಪು-ಚಾರಿತ್ರ್ಯ



**ಅ. ಸಂಗ್ರಹಕಿ**

ಒಂದೇ ಜಾತಿಗೆ ಸೇರಿದ ಅಥವಾ ಒಂದೇ ಗುಂಪಿನ ವಸ್ತುಗಳನ್ನು ಸಂಗ್ರಹಿಸಿ, ಅವುಗಳನ್ನು ಸುಂದರವಾಗಿ ಹಾಗೂ ಕ್ರಮಬದ್ಧವಾಗಿ ಜೋಡಿಸಬೇಕು. ಅವುಗಳ ಬಗ್ಗೆ ತಿಳಿಯಬೇಕು. ಬುಲ್‌ಬುಲ್‌ಗಳು ಇಷ್ಟವಾದ ವಸ್ತುವನ್ನು ಆರಿಸಿಕೊಳ್ಳಬಹುದು. ಈ ಕೆಳಗೆ ಕೆಲವು ವಸ್ತುಗಳನ್ನು ಸೂಚಿಸಲಾಗಿದೆ.

ಅಂಚೆಚೀಟಿ, ಅಂಚೆ ಮುದ್ರೆಗಳು, ಚಿತ್ರಗಳು, ಬೆಂಕಿ ಪೊಟ್ಟಣದ ಮೇಲಣ ಚಿತ್ರಗಳು, ಗರಿಗಳು, ಕೀಟಗಳು, ಚಿಟ್ಟೆಗಳು, ಎಲೆಗಳು ಅಥವಾ ಹೂವುಗಳು ಕೊನೆಯಪಕ್ಷ ಮಸಿ ಮುದ್ರಿಕೆಗಳನ್ನು (ಕಾರ್ಬನ್ ಮುದ್ರಿಕೆಗಳನ್ನು) ಶೇಖರಿಸಬಹುದು. ಒಂದು ಗುಂಪಿನಲ್ಲಿ ಕನಿಷ್ಠ 25 ವಸ್ತುಗಳನ್ನಾದರೂ ಶೇಖರಿಸಬೇಕು.

**ಅಥವಾ**

ಕೊನೆಯ ಪಕ್ಷ ತಿಂಗಳಾದರೂ ಅನುದಿನದ ಘಟನೆಗಳನ್ನು ಗುರುತಿಸಿ ಒಂದು ಕಚ್ಚಾಪುಸ್ತಕವನ್ನು (Scrap Book) ತಯಾರು ಮಾಡಬೇಕು.

**ಆ. ಮನೋರಂಜಕಿ**



ಕೆಳಕಂಡ ಸೂಚನೆಗಳಲ್ಲಿ ಯಾವುದಾದರೂ ಮೂರನ್ನು ಮಾಡಬೇಕು.

ಅ. ಸರಳವಾದ ಹಾಡನ್ನು ತಪ್ಪಿಲ್ಲದೆ ಇಂಪಾಗಿ ಹಾಡಲು ಅಥವಾ ವಾದ್ಯದ ಮುಖಾಂತರ ನುಡಿಸಲು ಬರಬೇಕು.

ಆ. ಸಂಗೀತದೊಂದಿಗೆ ನೃತ್ಯಮಾಡಲು ಬರಬೇಕು.

ಇ. ದಿಕ್ಕುಗಳನ್ನು ಅನುಸರಿಸಿಯಾಗಲೀ, ನೆಲದ ಮೇಲೆ ಮಾಡಿರುವ ವನಸಂಕೇತಗಳನ್ನಾಗಲೀ, ಇತರ ಹೆಗ್ಗುರುತಿನಿಂದಾಗಲೀ ಅಥವಾ ಇವೆಲ್ಲವನ್ನು ಒಳಗೊಂಡ ಸೂಚನೆಗಳ ಸಹಾಯದಿಂದಾಗಲಿ 300 ಮೀಟರುಗಳಿಗೆ ಮೀರದ ಸ್ಥಳಕ್ಕೆ ದಾರಿ ಕಂಡುಹಿಡಿದು ಹೋಗಲು ಸಮರ್ಥಳಾಗಬೇಕು.

ಈ. 16 ವಸ್ತುಗಳಲ್ಲಿ 12 ವಸ್ತುಗಳನ್ನು ಮರೆಯದೆ ಹೇಳಬಲ್ಲ ಜ್ಞಾಪಕಶಕ್ತಿ ಆಟದಲ್ಲಿ ಭಾಗವಹಿಸುವುದು.

## 2. ಗುಂಪು–ಆರೋಗ್ಯ

**ಅ. ಕ್ರೀಡಾಪಟು**

ಅ. 45 ಮೀಟರುಗಳಷ್ಟು ದೂರವನ್ನು 10 ಸೆಕೆಂಡುಗಳಲ್ಲಿ ಓಡಬೇಕು.

ಆ. 0.6 ಮೀಟರ್ ಎತ್ತರಕ್ಕೆ ನೆಗೆಯಬೇಕು.

ಇ. 1.53 ಮೀಟರ್ ಉದ್ದ ಜಿಗಿಯಬೇಕು.



ಈ. 2.13 ಮೀಟರ್ ಎತ್ತರದ ಹಗ್ಗ, ಕಂಬ ಅಥವಾ ತಾಳೆಮರ ಹತ್ತಬೇಕು.

ಉ. 152ರಿಂದ 163 ಗ್ರಾಂ, ತೂಕವಿರುವ ಕ್ರಿಕೆಟ್ ಚೆಂಡನ್ನು 13.65 ಮೀಟರ್ ದೂರಕ್ಕೆ ಎಸೆಯಬೇಕು. 9.10 ಮೀಟರ್ ದೂರದಿಂದ ಎಸೆದ ಚೆಂಡನ್ನು ಹಿಡಿಯಬೇಕು.

ಊ.ಭೂಮಿಯಿಂದ 3 ಮೀಟರ್ 13×15 ಸೆ.ಮೀ. ಹಲಗೆಯಲ್ಲಿ ಮಡಕೆಯನ್ನು ಇಟ್ಟುಕೊಂಡು ನಡೆಯಬೇಕು.

**ಆ. ಸೈಕಲ್ ಸವಾರಿಕೆ**



ಅ. ಸೈಕಲ್ ತುಳಿಯಲು ಕಲಿತಿರಬೇಕು.

ಆ. ಟ್ಯೂಬಿಗೆ ವಾಲ್ವ್ ಜೋಡಿಸಿ, ಗಾಳಿ ತುಂಬಲು ಕಲಿತಿರಬೇಕು.

ಇ. ಸೈಕಲ್‌ಗಳನ್ನು ಒರೆಸಿ, ಎಣ್ಣೆ ಹಾಕಲು ಕಲಿತಿರಬೇಕು.

ಈ. ರಸ್ತೆಯ ಸಂಚಾರ ನಿಯಮಗಳನ್ನು ತಿಳಿದಿರಬೇಕು.

**ಇ. ಈಜುಗಾರ್ತಿ**



ಅ. ಯಾವ ಭಂಗಿಯಲ್ಲಾದರೂ 25 ಮೀ. ಈಜಲು ಕಲಿಯಬೇಕು.

ಆ. ಅಂಗಾತನಾಗಿ ಉಪ್ಪು ನೀರಿನಲ್ಲಿ 60 ಸೆಕೆಂಡುಗಳು ಅಥವಾ ಸಿಹಿ ನೀರಿನಲ್ಲಿ 30 ಸೆಕೆಂಡುಗಳು ತೇಲಲು ಬರಬೇಕು.

**ಅಥವಾ**

ಉಪ್ಪು ನೀರಿನಲ್ಲಿ 2 ನಿಮಿಷಗಳೂ ಅಥವಾ ಸಿಹಿ ನೀರಿನಲ್ಲಿ ಒಂದು ನಿಮಿಷ ನಿಲುವೀಜು (Treading) ಕಲಿಯಬೇಕು.

ಇ. 14 ಮೀಟರ್ ಅಂಗಾತನಾಗಿ ಈಜಲು ಬರಬೇಕು.

ಈ. ನೀರಿನಲ್ಲಿ ನಿಂತಿರುವಾಗ ಅಥವಾ ಈಜುತ್ತಿರುವಾಗ ಥಟ್ಟನೆ ಮುಳುಗಲು-ಬಾತು ಮುಳುಗು (Ducks dive) ಬರಬೇಕು.

**ಅಥವಾ**

ಹಲಗೆ, ನದೀದಡ, ದೋಣಿಯಿಂದ ಮೊಳಕಾಲನ್ನು ಕೈಯಿಂದ ಬಳಸಿ ಹಿಡಿದು ಧುಮುಕಬೇಕು (ಜೇನುಕುಂಡ ಧುಮುಕು / ಹನಿಪಾಟ್ ಡೈವ್)

**ಈ. ತಂಡ ಕ್ರೀಡಾಪಟು**



ತಂಡ ಕ್ರೀಡಾಪಟು ಕ್ರೀಡಾಸಕ್ತಳಾಗಿರಬೇಕು. ಪಂದ್ಯದಲ್ಲಿ ಸೋತವರು ಗೆದ್ದವರನ್ನು ಅಭಿನಂದಿಸಬೇಕು. ಫ್ಲಾಕಿನಲ್ಲಿ ನಡೆಸುವ ಪಂದ್ಯಗಳಲ್ಲಿ 3 ತಿಂಗಳ ಕಾಲವಾದರೂ ಕ್ರಮವಾಗಿ ಜವಾಬ್ದಾರಿಯಿಂದ ಹಾಗೂ ಪ್ರಾಮಾಣಿಕವಾಗಿ ಉತ್ತಮ ಕ್ರೀಡಾಪಟು ಎನ್ನಿಸಿಕೊಂಡರೆ ಈ ಪದಕವನ್ನು ಪಡೆಯಲು ಅರ್ಹಳು.

ಈ ಪದಕಕ್ಕೆ ಅರ್ಜಿ ಸಲ್ಲಿಸುವ ಮೊದಲು, ಆಟ ಆಡಿದ ತಾರೀಖು ಮತ್ತು ಆಟಗಳ ಹೆಸರನ್ನು ಖಚಿತವಾಗಿ ಬರೆದಿಟ್ಟುಕೊಂಡು ಜಿಲ್ಲಾ ಆಯುಕ್ತರಿಗೆ ತೋರಿಸಿ ಸಹಿ ಪಡೆಯಬೇಕು.

## 3. ಗುಂಪು-ಕರಕುಶಲತೆ

**ಅ. ಚಿತ್ರಕಲಾ ಕುಶಲಿ**

ಅ. ಸೀಸದಕಡ್ಡಿ, ಕುಂಚ, ಬಣ್ಣದ ಕಡ್ಡಿಯಿಂದ 18 ಸೆಂ.ಮೀ. ಉದ್ದ ಮತ್ತು 13 ಸೆಂ.ಮೀ. ಅಗಲವಿರುವ, ಯಾವುದಾದರೊಂದು ಘಟನೆ ಅಥವಾ ವ್ಯಕ್ತಿಯ ಚಿತ್ರ ಬರೆಯಬೇಕು.



ಆ. ಕೆಳಕಂಡವುಗಳಲ್ಲಿ ಒಂದನ್ನು ಮಾಡುವುದು.

i) ಮಸಿ ಲೇಖನಿಯಿಂದಾಗಲಿ, ಸೀಸದ ಕಡ್ಡಿಯಿಂದಾಗಲೀ, ನೆನಪಿನಿಂದಾಗಲಿ, ನೋಡಿಕೊಂಡಾಗಲಿ, ಒಂದು ಮೃಗ ಅಥವಾ ವ್ಯಕ್ತಿಯ ಚಿತ್ರ ಬರೆಯುವುದು.

ii) ಒಂದು ಭೂದೃಶ್ಯ ಅಥವಾ ಸ್ಥಿರ ಗುಂಪಿನ ಚಿತ್ರವನ್ನು ಬರೆಯುವುದು.

iii) ಚಿತ್ರಿಸಲು ಒಂದು ಪುಸ್ತಕವನ್ನಿಟ್ಟು, 3 ತಿಂಗಳುಗಳಲ್ಲಿ 12 ರೇಖಾಚಿತ್ರ ಬಿಡಿಸುವುದು.

iv) ಯಾವುದಾದರೂ ಕಥೆಗೆ ಸಂಬಂಧಿಸಿದಂತೆ ಬೆಂಕಿಕಡ್ಡಿಗಳಿಂದ ಆಕೃತಿಗಳನ್ನು ರಚಿಸಿ (ನಾಲ್ಕಕ್ಕೆ ಕಡಿಮೆಯಿಲ್ಲದಂತೆ ಚಿತ್ರಗಳನ್ನು ಮಾಡಿ).

v) ಒಂದು ಸಾಧಾರಣವಾದ ಶುಭಾಶಯ ಎತ್ರವನ್ನು ಸೀಸದಕಡ್ಡಿ, ಕುಂಚ, ಬಣ್ಣದ ಸೀಸದ ಕಡ್ಡಿ ಉಪಯೋಗಿಸಿ ತಯಾರಿಸಿರಿ.

vi) ಮೇಣ, ಸಾಬೂನು, ಜೇಡಿಮಣ್ಣು, ರಟ್ಟು ಅಥವಾ ಇತರೆ ಪದಾರ್ಥದಿಂದ 20 ಸೆಂ.ಮೀ.ಗಿಂತ ಕಡಿಮೆ ಎತ್ತರವಿಲ್ಲದ ಮನುಷ್ಯನ ಅಥವಾ ಪ್ರಾಣಿಯ ಮಾದರಿಯನ್ನು ಮಾಡಬೇಕು.

**ಸೂಚನೆ:** ಎಲ್ಲಾ ರೀತಿಯಿಂದಲೂ ಬುಲ್‌ಬುಲ್‌ಳ ಸಾಮಾನ್ಯ ಆಸಕ್ತಿಗಳನ್ನು ಪ್ರೋತ್ಸಾಹಿಸಬೇಕು. ತಾಂತ್ರಿಕ ಜಾಣ್ಮೆಗೆಷ್ಟೋ ಅಷ್ಟೇ ಮನ್ನಣೆಯನ್ನು ಬುಲ್‌ಬುಲ್‌ಳ ಶ್ರದ್ಧೆಗಳಿಗೂ ನೀಡಬೇಕು.

**ಆ. ಗೃಹ ಕುಶಲಿ**



ಸೂಜಿಗೆ ದಾರವನ್ನು ಪೋಣಿಸಿ, ಗುಂಡಿಯನ್ನು ಹೊಲಿಯಲು ಬರಬೇಕು ಹಾಗೂ ಕೆಳಗೆ ಕಂಡ ಎರಡು ಪರೀಕ್ಷೆಗಳಲ್ಲಿ ಭಾಗವಹಿಸಬೇಕು.

ಅ. ಹೆಣಿಗೆ ಅಥವಾ ಕ್ರೋಷದಿಂದ ಉಪಯುಕ್ತವಾದ ವಸ್ತು ತಯಾರಿಸಬೇಕು.

ಆ. ಒಂದು ಕೈಚೀಲ ಅಥವಾ ಹ್ಯಾಮಕ್ (ಉಯ್ಯಾಲೆಯಂತೆ ತೂಗುಗುಟ್ಟುವ ಬಲೆಯ ಹಾಸಿಗೆ) ಹೆಣಿಯಬೇಕು.

ಇ. ಕ್ಯಾನ್‌ವಾಸ್ ಮೇಲೆ ಅಡ್ಡ ಹೊಲಿಗೆಯಿಂದ ಚಿತ್ರವನ್ನು ತಯಾರಿಸುವುದು.

ಈ. ಕ್ಯಾನ್‌ವಾಸ್ ಅಥವಾ ಗೋಣಿತಾಟಿನ ಮೇಲೆ ಕಂಬಳಿ ಅಥವಾ ಚಾಪೆ ತಯಾರಿಸುವುದು.

ಉ. ಉಣ್ಣೆಯ ಅಂಗಿ ಅಥವಾ ಕಾಲುಚೀಲದ ತೂತನ್ನು ದಾರದ ಎಳೆಗಳಿಂದ ಡಾರ್ನ್ (ಎಳೆ ಮುಚ್ಚುವ ಹೊಲಿಗೆ) ದಾರದಿಂದ ಹೊಲಿಯಬೇಕು.

ಊ.ಕಂಠವಸ್ತ್ರವನ್ನು ಒಗೆದು ಇಸ್ತ್ರಿ ಮಾಡುವುದು.

ಋ. ಕೈಪೊರಕೆ ಮತ್ತು ಕಸದ ಬುಟ್ಟಿಯನ್ನು ತಯಾರಿಸುವುದು.

ಎ. ತಾಳೆಯ ಮರದ ಗರಿಯಿಂದ ಒಂದು ಉಪಯುಕ್ತ ವಸ್ತುವನ್ನು ತಯಾರಿಸುವುದು.

ಏ. ಮಂಚದ ಚೌಕಟ್ಟಿಗೆ ಹಾಸಿಗೆ ಹಾಸನ್ನು ಬೇಕಾದ ಆಕಾರದಲ್ಲಿ ಹೆಣೆಯುವುದನ್ನು ಕಲಿಯುವುದು.

ಐ. ಹುಲ್ಲಿನಿಂದ ತಟ್ಟೆ ಅಥವಾ ಚಾಪೆ ತಯಾರಿಸುವುದು.

ಒ. ತಕಲಿ ಅಥವಾ ಚರಕದಿಂದ 50 ಮೀ. ದಾರವನ್ನು ತೆಗೆಯುವುದು.

ಓ. ಹಳ್ಳಿಯ ಮಾದರಿಯಲ್ಲಿ ಗೋಡೆ ಅಥವಾ ನೆಲ ಸಾರಿಸಲು ತಿಳಿದಿರುವುದು.

ಔ. ಹುಲ್ಲು, ಗರಿ, ಬೆತ್ತ, ಜೊಂಡು ಅಥವಾ ಬಿದುರಿನಿಂದ ಒಂದು ವಸ್ತು ತಯಾರಿಸುವುದು.

**ಇ. ಕಸೂತಿ ಚತುರೆ**

ಅ. ನಿನ್ನ ಹೆಸರನ್ನು ಕ್ರಾಸ್ ಸ್ಟಿಚ್ ಅಥವಾ ಬೇರೆ ಯಾವ ಬಗೆಯ ಹೊಲಿಗೆಯಲ್ಲಾದರೂ ಹೊಲಿಯಲು ಕಲಿಯಬೇಕು.

ಆ. ಕೆಳಕಂಡ ಹೊಲಿಗೆಗಳಲ್ಲಿ ಮೂರು ವಿಧಗಳನ್ನಾದರೂ ಕಲಿಯಬೇಕು. ಚೈನ್, ಹೆರ್ರಿಂಗ್ ಬೋನ್, ಫೆದರ್ ಸ್ಟಿಚ್, ಗುಂಡಿ ಹೊಲಿಗೆ, ಡಾರ್ನಿಂಗ್ ಮತ್ತು ಫ್ರೆಂಚ್ ನಾಟ್.



ಇ. ಮಗುವಿನ ಅಥವಾ ಗೊಂಬೆಯ ಉಡುಪು ಹೊಲಿದು ಮೇಲೆ ಹೇಳಿದ ಹೊಲಿಗೆಯನ್ನು ಪ್ರಯೋಗಿಸಿ ಆಭರಣಗಳನ್ನು ತಯಾರಿಸುವುದು.

ಈ. ಈ ಕೆಳಗಿನವುಗಳಲ್ಲಿ ಯಾವುದಾದರೂ ಮೂರನ್ನು ತಯಾರಿಸುವುದು.

i) ಕಾಲುಚೀಲ ಅಥವಾ ಹಳೆಯ ಬಟ್ಟೆಯಿಂದ ಆಟಿಕೆಯನ್ನು ತಯಾರಿಸುವುದು.

ii) ಚಿಕ್ಕಮಗುವಿಗೆ ತಕ್ಕಂತೆ ಆಟಿಕೆ ಅಥವಾ ಚಿತ್ರ ಪುಸ್ತಕ ತಯಾರಿಸುವುದು.

iii) ಬೊಂಬೆಯ ಪೀಠೋಪಕರಣ (ಕಾಗದ, ರಟ್ಟು ಇತ್ಯಾದಿ) ಅಥವಾ ಮಣ್ಣಿನಿಂದ ಮಾಡಿದ ಪಕ್ಷಿಗಳು, ಪ್ರಾಣಿಗಳು, ಮೀನುಗಳು ಅಥವಾ ಕ್ರಿಮಿಕೀಟಗಳನ್ನು ತಯಾರಿಸುವುದು, ಗಾಳಿಪಟವನ್ನು, ಗೊಂಬೆಯನ್ನು ತಯಾರಿಸುವುದು.

iv) ನಿನ್ನಿಷ್ಟದಂತೆ ಒಂದು ಆಟಿಕೆ ತಯಾರಿಸುವುದು.

**ಈ. ಆಟಿಕೆ ತಯಾರಕಿ**



ಅ. ಕಚ್ಚಾವಸ್ತುವಿನಿಂದ ಅಂದರೆ ಚೂರು ಬಟ್ಟೆ, ಕಾಗದ, ಕರಟ, ಕಾಯಿ, ಬಟ್ಟೆ ಸಿಕ್ಕಿಸುವ ಗೂಟ ಮುಂತಾದ ಅನುಪಯುಕ್ತ ವಸ್ತುಗಳಿಂದ ಒಂದು ಉಪಯುಕ್ತ ವಸ್ತುವನ್ನು ತಯಾರಿಸು ಮತ್ತು ಸಾಧಾರಣ ಗಾತ್ರದ ಎಂಜಿನ್ ಮೋಟಾರು, ಗೊಂಬೆ ಅಥವಾ ಪ್ರಾಣಿಯನ್ನು ಮಾಡು ಅಥವಾ ಹೊಲದ ಕಣ, ಕಾಡು ಮೃಗಗಳು, ಕುಟೀರದ ಪೀಠೋಪಕರಣ, ಉದ್ಯಾನ ಇವುಗಳನ್ನು ಯೋಗ್ಯ ಪ್ರಮಾಣದಲ್ಲಿ ಬಣ್ಣ ಹಾಕಿ ತಯಾರಿಸುವುದು.

**ಸೂಚನೆ:** ರಜತ ಪಂಖ್‌ದಲ್ಲಿ ತಯಾರಿಸಿದ ವಸ್ತುಗಳನ್ನು ಈ ಪದಕ ಪಡೆಯುವುದಕ್ಕೆ ವಸ್ತುವಾಗಿ ಉಪಯೋಗಿಸಬಾರದು.

ಈ. ನಿನ್ನ ನೆರೆ-ಹೊರೆಯಲ್ಲಿ ಇತಿಹಾಸಕ್ಕೆ ಸಂಬಂಧಪಟ್ಟ ಮತ್ತು ಆಸಕ್ತಿ ಹುಟ್ಟಿಸುವ ಸ್ಥಳ ಪರಿಚಯ ಮಾಡಿಕೊಂಡಿರಬೇಕು.

**ಈ. ಗೃಹ ಶಿಸ್ತು**

ಅ. ಕೊಠಡಿಯನ್ನು ಶುಚಿಯಾಗಿ ಮತ್ತೆ ಅಚ್ಚುಕಟ್ಟಾಗಿ ಇಡಲು ತಿಳಿದಿರಬೇಕು.

ಆ. ಹಾಸಿಗೆ ಹಾಸುವುದಕ್ಕೆ ಬರಬೇಕು.

ಇ. ಪಿಂಗಾಣಿ ಪಾತ್ರೆಗಳು, ಸಾಮಾನುಗಳನ್ನು ತೊಳೆಯಲು ಬರಬೇಕು. ಕಿಟಕಿ ಒರೆಸುವುದು ಮತ್ತು ಹಿತ್ತಾಳೆ ಪಾತ್ರೆಗಳನ್ನು ಶುಭ್ರ ಮಾಡಲು ಬರಬೇಕು.



ಈ. ಆಲೂಗಡ್ಡೆಯನ್ನು ಬೇಯಿಸಲು ಸಿಪ್ಪೆಯನ್ನು ಸುಲಿಯಲು ಅಥವಾ ಹುರಿಯಲು ಬರಬೇಕು.

ಉ. ಟೀ, ಕಾಫಿ ಅಥವಾ ಬೇರೆ ಯಾವುದಾದರೂ ಬಿಸಿಯಾದ ಪಾನೀಯವನ್ನು ಮಾಡಲು ಕಲಿತಿರಬೇಕು.

## 5. ಗುಂಪು–ಸಂರಕ್ಷಣೆ

### ವಿಶ್ವ ಸಂರಕ್ಷಣೆ

ಈ ಕೆಳಗೆ ಹೇಳಿರುವುದರಲ್ಲಿ ಯಾವುದಾದರೂ ಮೂರನ್ನು ಮಾಡುವುದು.



ಅ.1. ಮೃಗಾಲಯ, ಸಸ್ಯೋದ್ಯಾನ ನಿಸರ್ಗ, ಚಾರಿತ್ರಿಕ ವಸ್ತುಗಳ ಸಂಗ್ರಹಾಲಯ ಅಥವಾ ವನ್ಯಜೀವಿಗಳ ಚಲನಚಿತ್ರವನ್ನು ನೋಡಿ, ನೀನು ಗಮನಿಸಿರುವುದನ್ನು ಪರೀಕ್ಷಕರಿಗೆ ತಿಳಿಸು.

2. ನಿನ್ನದೇ ಆದ ಒಂದು ಸಾಕುಪ್ರಾಣಿಯನ್ನು ಮೂರು ತಿಂಗಳಾದರೂ ನೋಡಿಕೊಳ್ಳಬೇಕು.

3. ಸಾರ್ವಜನಿಕ ಸ್ಥಳಗಳಾದ ಶಾಲಾ ಆವರಣ, ಉದ್ಯಾನವನ, ಬಸ್‌ನಿಲ್ದಾಣ, ದೇವಸ್ಥಾನಗಳ ಆವರಣದಲ್ಲಿ ಎಸೆದಾಡಿದ ಕಸಕಡ್ಡಿ, ಕಾಗದದ ಚೂರು ಇತ್ಯಾದಿಗಳನ್ನು ಪ್ರತಿದಿನ ಕನಿಷ್ಟ ಒಂದು ಘಂಟೆಯಂತೆ, ಒಟ್ಟು ಮೂರು ಘಂಟೆಗಳ ಕಾಲ ಸ್ವಚ್ಛ ಮಾಡುವ ಕಾರ್ಯದಲ್ಲಿ ಭಾಗವಹಿಸುವುದು.

4. ಹಿಂದು ಹಮ್ಮಿಕೊಂಡಿದ್ದ ಪ್ರಕೃತಿ ವೀಕ್ಷಣಾ ಕಾರ್ಯದಲ್ಲಿ ಭಾಗವಹಿಸಿ, ಅಲ್ಲಿ ಸಂಗ್ರಹಿಸಿದ ವಸ್ತುಗಳನ್ನು ಪುಸ್ತಕದಲ್ಲಿ ಅಂಟಿಸುವುದು.

5. ಪಕ್ಷಿಗಳಿಗೆ ಸ್ನಾನಮಾಡಲು ಒಂದು ಪುಟ್ಟ ನೀರಿನ ತೊಟ್ಟಿಯನ್ನು ತಯಾರಿಸುವುದು ಮತ್ತು ಆಹಾರ ಸೌಕರ್ಯಕ್ಕಾಗಿ ಒಂದು ಮಾದರಿ ರಚಿಸುವುದನ್ನು ಕಲಿತಿರಬೇಕು.

6. ಪಕ್ಷಿಗಳಿಗೆ ವಾಸಿಸಲು ಪೆಟ್ಟಿಗೆ ಗೂಡನ್ನು ರಚಿಸುವುದು.

7. ಏನೂ ಬೆಳೆಯದ ಸ್ಥಳದಲ್ಲಿ ಸಸ್ಯಗಳನ್ನಾಗಲಿ, ಹುಲ್ಲುಗಾವಲನ್ನಾಗಲೀ ಬೆಳೆಸಿ, ಮೂರು ತಿಂಗಳ ಕಾಲ ಪೋಷಿಸುವುದು.

8. ಮನೆಯ ಹಿತ್ತಲಿನಲ್ಲಾಗಲಿ ಅಥವಾ ತೋಟದಲ್ಲಾಗಲಿ ಕಾಂಪೋಸ್ಟ್ ಗೊಬ್ಬರದ ಗುಂಡಿ ತಯಾರಿಸುವುದು.

9. ಭೂಸವೆತದ ಅಪಾಯವನ್ನು ಹಾಗೂ ಇದನ್ನು ತಡೆಗಟ್ಟಲು ಜಾಗ್ರತ ಕ್ರಮಗಳನ್ನು ತಿಳಿದಿರುವುದು.

ಆ. ಮನೆಯ ಹೊರಗೆ ಅಥವಾ ಮಹಡಿಯ ಮೇಲಾಗಲಿ ಅಥವಾ ಕುಂಡಗಳಲ್ಲಿ ಗಿಡಗಳನ್ನು ಅಥವಾ ಹುಲ್ಲನ್ನು ಬೆಳೆಸಿ ನಿನ್ನ ಪರಿಸರವನ್ನು ಶುಚಿಗೊಳಿಸುವುದು.

ಇ. ಇವುಗಳಲ್ಲಿ ಒಂದನ್ನಾದರೂ ಮಾಡುವುದು:

1. ಮೃಗಾಲಯದಲ್ಲಿರುವ ಯಾವುದಾದರೂ 5 ಪ್ರಾಣಿಗಳ ಬಗ್ಗೆ, ಅಂದರೆ ಅವುಗಳ ಮೂಲದೇಶ, ಆಹಾರ ಅಭ್ಯಾಸ ಮತ್ತು ಅವುಗಳ ಬಗ್ಗೆ ವಹಿಸಬೇಕಾದ ಎಚ್ಚರಿಕೆ ಇವುಗಳನ್ನು ಒಂದು ಸಣ್ಣ ಪುಸ್ತಕದಲ್ಲಿ ಬರೆದು ಇಡುವುದು.

2. ಹಿಂಡಿನವರು ಹಿಂಬಾಲಿಸಿ ಬರಬೇಕಾದ ದಾರಿಗೆ ಜಾಡು (Trail) ಹಾಕುವುದನ್ನು ಕಲಿಯಬೇಕು.

3. ಒಂದು ಕಾಡು ಪ್ರಾಣಿ, ಮರ, ಮೀನು ಅಥವಾ ಪಕ್ಷಿಯನ್ನು ವೀಕ್ಷಿಸಿ ಅದರ ಬಗ್ಗೆ ಆದಷ್ಟು ಮಾಹಿತಿಯನ್ನು ಸಂಗ್ರಹಿಸಿ ಪರೀಕ್ಷರಿಗೆ ಹೇಳುವುದು.

**ಸೂಚನೆ:**

1. ಈ ಅರ್ಹತಾ ಪದಕದ ಜೊತೆಗೆ ರಾಜ್ಯ ಪ್ರಧಾನ ಆಯುಕ್ತರಿಂದ ವಿಶೇಷ ಪ್ರಮಾಣಪತ್ರ ಕೊಡಲಾಗುತ್ತದೆ.

2. ಈ ಪದಕವನ್ನು ಬಲಜೇಬಿನ ಮೇಲ್ಭಾಗದಲ್ಲಿ ಧರಿಸಬೇಕು.

ಆ. ಪರಂಪರೆ

1. ಸ್ಥಳೀಯ ಸಂಸ್ಕೃತಿ ಮತ್ತು ಪರಂಪರೆಯ ಬಗ್ಗೆ ತಿಳಿದಿರಬೇಕು. ಈ ಮಾಹಿತಿಗಳನ್ನು ಮತ್ತು ಚಿತ್ರಗಳನ್ನು ಒಳಗೊಂಡಂತೆ ಕಚ್ಚಾ ಪುಸ್ತಕ (Scrap Book) ತಯಾರಿಸುವುದು.

2. ಸುತ್ತಲಿನ ನಿಸರ್ಗ ಅಧ್ಯಯನ ಮಾಡುವುದು.

- ಸಾಮಾನ್ಯ ಸಸ್ಯಗಳು ಅದರ ಉಪಯೋಗ
- ಸಾಮಾನ್ಯ ಪಕ್ಷಿಗಳು
- ಸಾಮಾನ್ಯ ಪ್ರಾಣಿಗಳು

3. ತನ್ನ ಕುಟುಂಬದ ಸಂಸ್ಕೃತಿ ಪರಂಪರೆ ಮತ್ತು ಸಂಪ್ರದಾಯಗಳನ್ನು ಮೊದಲು ತಿಳಿಯುವುದು.

- ಅದನ್ನು ಕುರಿತು ಕಚ್ಚಾಪುಸ್ತಕ ತಯಾರಿಸುವುದು. ಅದರಲ್ಲಿ ವಂಶವೃಕ್ಷವನ್ನು ದಾಖಲು ಮಾಡುವುದು.
- ಮನೆಯ ಹಬ್ಬ ಸಂಪ್ರದಾಯಗಳ ಬಗ್ಗೆ ಛಾಯಾಚಿತ್ರ ಅಂಟಿಸಿ ವಿಷಯ ಬರೆಯುವುದು.
- ಸಾಂಪ್ರದಾಯಿಕ ಹಾಡು, ನೃತ್ಯ, ಚಿತ್ರ ಅಂಟಿಸಿ ಬರೆಯುವುದು.
- ಸಾಂಪ್ರದಾಯಿಕ ಅಡುಗೆ ಊಟದ ಬಗ್ಗೆ ಬರೆಯುವುದು.
- ಉಡಿಗೆ ತೊಡಿಗೆಗಳ ಬಗ್ಗೆ ಬರೆಯುವುದು.

4. ಮುಖ್ಯ ಕಟ್ಟಡಗಳು, ದೇವಾಲಯಗಳು, ಕಲೆ ಮತ್ತು ಸಾಹಿತ್ಯದ ಬಗ್ಗೆ ತಿಳಿಯುವುದು.

5. ಪ್ರಾತ್ಯಕ್ಷಿಕ (Practical) ಕೆಲಸ

- ಸ್ಥಳೀಯ ಸ್ಮಾರಕ ಹಾಗೂ ವಸ್ತು ಸಂಗ್ರಹಾಲಯಕ್ಕೆ ಭೇಟಿ ನೀಡುವುದು.
- ರಂಗೋಲಿ, ಮಡಿಕೆ ಮಾಡುವುದು ಮುಂತಾದ ಸ್ಥಳೀಯ ಕರಕುಶಲತೆಗಳನ್ನು ಕಲಿಯುವುದು.

– ಜನಪದ ಕಥೆ ಮತ್ತು ಐತಿಹಾಸಿಕ ಕಥೆಗಳನ್ನು ಅಭಿನಯಿಸುವುದು.

## ಪರಂಪರೆ

ಬುಲ್‌ಬುಲ್‌ಗಳು ತಮ್ಮ ತಮ್ಮ ಸ್ಥಳೀಯ ಸಂಸ್ಕೃತಿ ಮತ್ತು ಪರಂಪರೆ ಅಧ್ಯಯನ ಮಾಡಿ ಚಿತ್ರಗಳನ್ನೂ ಸಂಗ್ರಹಿಸಿ ಒಂದು ಪುಸ್ತಕವನ್ನು ಮಾಡಬೇಕು.

1. **ಭೌಗೋಳಿಕ ಪರಿಸರ:** ನದಿ, ಬೆಟ್ಟ, ಗುಡ್ಡ, ಮರಗಳು, ಸಸ್ಯಗಳು ಅವುಗಳ ಉಪಯೋಗ ಸ್ಥಳೀಯ ಪಕ್ಷಿಗಳು (ಸುತ್ತಲಿನ ಪಶುಪಕ್ಷಿಗಳು ಮತ್ತು ಗಿಡಮರಗಳು) ಅವುಗಳ ಉಪಯೋಗ.




2. ತನ್ನ ಮನೆಯ ಸಂಸ್ಕೃತಿ ಮತ್ತು ಪರಂಪರೆಯ ಪದ್ಧತಿಗಳ ಬಗ್ಗೆ ತಿಳಿಯಬೇಕು.
   - ವಂಶವೃಕ್ಷ ಹೊಂದಿರುವ ಒಂದು ಚಿತ್ರ ಪುಸ್ತಕ– ಅಜ್ಜ–ಅಜ್ಜಿ, ಮುತ್ತಜ್ಜ–ಮುತ್ತಜ್ಜಿ ಹಾಗೂ ಸಾಧಕರ ಮಾಹಿತಿ ಸಂಗ್ರಹಿಸಬೇಕು.
   - ಊರ ಹಬ್ಬಗಳಲ್ಲಿ ಭಾಗವಹಿಸಿ ಅದರ ಬಗ್ಗೆ ಬರೆದು ಚಿತ್ರಪುಸ್ತಕ ತಯಾರಿಸಿ.
   - ಸಾಂಪ್ರದಾಯಿಕ ಹಾಡು, ನೃತ್ಯ ಕಲಿಯಿರಿ.
   - ಉಡುಗೆ ತೊಡುಗೆ ಆಭರಣಗಳ ಚಿತ್ರ ಸಂಗ್ರಹಿಸಿ / ಬಿಡಿಸಿ.
   - ಸಾಂಪ್ರದಾಯಿಕ ಅಡಿಗೆ ತಯಾರಿಸಿ ಈ ಬಗ್ಗೆ ಬರೆಯಿರಿ.
3. ಸ್ಥಳೀಯ ಕಲೆ
   - ವಿಶೇಷ ಕಟ್ಟಡ
   - ದೇವಾಲಯಗಳು
   - ವಾದ್ಯಗಳು
   - ನೃತ್ಯಗಳು
   - ವಿಶೇಷ ಕಲೆ

ಅಂದು ಮತ್ತು ಇಂದುಗಳಲ್ಲಿ ಆಗಿರುವ ಬದಲಾವಣೆಗಳು.

4. ಸ್ಥಳೀಯ ಸ್ಮಾರಕ ಮತ್ತು ವಸ್ತು ಸಂಗ್ರಹಾಲಯಕ್ಕೆ ಭೇಟಿ.

- ಸ್ಥಳೀಯ ಕರಕೌಶಲ ಕಲಿಯುವುದು.
- ಸ್ಥಳೀಯ ಕಥೆ ಮತ್ತು ದಂತಕಥೆಗಳ ಅಭಿನಯ.

a) ಕೋಮಲ ಪಂಖ್ ಬುಲ್‌ಬುಲ್ **ಎರಡು** ಪ್ರಾವೀಣ್ಯತಾ ಪದಕಕ್ಕಿಂತ ಹೆಚ್ಚು ಪಡೆಯಬಾರದು.

b) ರಜತ ಪಂಖ್ ಬುಲ್‌ಬುಲ್ ಮೇಲಿನ ಎರಡು ಪ್ರಾವೀಣ್ಯತಾ ಪದಕ ಹೊರತುಪಡಿಸಿ **ನಾಲ್ಕು** ಪ್ರಾವೀಣ್ಯತಾ ಪದಕವನ್ನು ಗಳಿಸಬೇಕು.

c) ಸುವರ್ಣ ಪಂಖ್ ಬುಲ್‌ಬುಲ್ **ಒಂದು** ಪ್ರಾವೀಣ್ಯತಾ ಪದಕ ಗಳಿಸುವುದು.

d) ಹೀರಕ್ ಪಂಖ್ ಬುಲ್‌ಬುಲ್ ಪ್ರಾವೀಣ್ಯತಾ ಪದಕ ಪಡೆದದ್ದನ್ನು ಹೊರತುಪಡಿಸಿ ಯಾವುದಾದರೂ **ಎರಡು** ಪ್ರಾವೀಣ್ಯತಾ ಪದಕ ಪಡೆಯುವುದು.

e) **ಒಂಭತ್ತು** ಪ್ರಾವೀಣ್ಯತಾ ಪದಕ ಪಡೆದವರಿಗೆ "ಬಂಗಾರದ ಬಾಣ" ಎಂಬ ವಿಶೇಷ ಪ್ರಾವೀಣ್ಯತಾ ಪದಕವನ್ನು ನೀಡಲಾಗುವುದು.



# ಬುಲ್‌ಬುಲ್ ನಿಯಮಕ್ಕೆ ಆಧಾರವಾಗಿರುವ ಹತ್ತು ಸುವರ್ಣಾಂಶಗಳು

1. ಒಬ್ಬ ಬುಲ್‌ಬುಲ್ ಸದಾಕಾಲ ಹಿರಿಯರಿಗೆ ಪ್ರಾಮಾಣಿಕಳು ಮತ್ತು ಅವರ ಆಜ್ಞೆಯನ್ನು ವಿಧೇಯವಾಗಿ ನಗುಮುಖದಿಂದ ಪಾಲಿಸುವವಳು.
2. ಒಬ್ಬ ಬುಲ್‌ಬುಲ್ ಹಿಂಡಿನಲ್ಲಿ ಸಂಚರಿಸಲು ಒಲವು ಮತ್ತು ಗುಂಪಿನಲ್ಲಿ ಕಲಿಯಲು ನಂಬಿಕೆಯುಳ್ಳವಳು.
3. ಒಬ್ಬ ಬುಲ್‌ಬುಲ್ ಪ್ರತಿದಿನ ಒಳ್ಳೆ ಕೆಲಸ ಮಾಡುವಳು.
4. ಒಬ್ಬ ಬುಲ್‌ಬುಲ್ ಪ್ರಾಕೃತಿಕ ಪರಿಸರದಲ್ಲಿ ಸ್ವತಂತ್ರವಗಿ ಚಲಿಸಿ ಪ್ರಕೃತಿಯಿಂದ ಆಮೂಲ್ಯ ವ್ಸತುಗಳ ಮೌಲ್ಯ ತಿಳಿಯುವಳು.
5. ಒಬ್ಬ ಬುಲ್‌ಬುಲ್ ಸ್ವಚ್ಛವಾದ ಮತ್ತು ಅಚ್ಚುಕಟ್ಟಾದ ಸ್ಥಳಗಳ ಅತಿಯಾದ ಪ್ರೀತಿ.
6. ಒಬ್ಬ ಬುಲ್‌ಬುಲ್ ತನ್ನ ಶರೀರ ಮತ್ತು ವಸ್ತುಗಳನ್ನು ಸ್ವಚ್ಛವಾಗಿ ಮತ್ತು ಅಚ್ಚುಕಟ್ಟಾಗಿ ಇಟ್ಟುಕೊಳ್ಳಲು ಇಚ್ಛಿಸುತ್ತಾಳೆ.
7. ಒಬ್ಬ ಬುಲ್‌ಬುಲ್ ತನ್ನ ಕೃತ್ಯ ಮತ್ತು ನಜತೆಯಲ್ಲಿ ವಿನಯಶೀಲಳು.
8. ಒಬ್ಬ ಬುಲ್‌ಬುಲ್ ತನಗೆ ಕೊಟ್ಟ ಜವಾಬ್ದಾರಿಗಳನ್ನು ಕಾಲ ಕಾಲಕ್ಕೆ ಹೆಗಲ ಮೇಲೆ ಹೊರುವುದನ್ನು ಪ್ರೀತಿಸುವಳು.
9. ಒಬ್ಬ ಬುಲ್‌ಬುಲ್ ಕಥೆಗಳ ಮತ್ತು ಅಭಿನಯ ಗೀತೆಗಳ ಮೂಲಕ ನಂಬುವ ಹಾಗೆ ಆಟದ ವಿಧಾನದಲ್ಲಿ ಅವಳು ಕೆಲಸ ಮಾಡಿ ಆನಂದಿಸುವಳು.
10. ಒಬ್ಬ ಬುಲ್‌ಬುಲ್ ಧ್ಯೇಯ, ಮುಂದೆ ಒಳ್ಳೆಯ ಮತ್ತು ಉಪಯುಕ್ತ ನಾಗರಿಕಳಾಗುವುದು.

## ಬುಲ್‌ಬುಲ್ ಪ್ರಾರ್ಥನ ಗೀತೆ

ಹಮ್ ಹೈ ಛೋಟೆ ಛೋಟೆ ಬಾಲ್,
ಹಮಾದಿ ಲೇನಾ ತೂ ಸಂಭಾಲ್,
ಕದಂ ಕದಂ ಪರ ಕರೆ ಗಲತಿಯೊ
ಸದಬುದ ದೇನಾ ಬುಲಾ ಗಲತಿಯಾ
ತುಮ ಬಿನ ಕ್ ಲೇಗಾ ಸಂಭಾಲ್ (ಹಮ್)

# ತಾರ ಕಥೆ



ತಾಯಿ ಕೆಲಸದ ಒತ್ತಡದಲ್ಲಿದ್ದಳು.
ತಾರ ಕಿಟಕಿಯಲ್ಲಿ ಬಗ್ಗಿ ನೋಡಿದಳು.



ತಾರ ಹೋಗಿ ಮರದ ಕೆಳಗೆ
ಬೇಸರದಿಂದ ಕುಳಿತಳು. ಮರದ ಮೇಲೆ
ಬುಲ್‌ಬುಲ್ ಪಕ್ಷಿ ಬಂದು ಕುಳಿತಿತ್ತು.



ಬುಲ್‌ಬುಲ್ ಪಕ್ಷಿ
ಗರುಡನಷ್ಟು ದೊಡ್ಡದಾಗಿತ್ತು.



ತಾರ ಬುಲ್‌ಬುಲ್ ಪಕ್ಷಿಯ ಮೇಲೆ
ಕುಳಿತು ಹಳ್ಳಿ ಮತ್ತು ಪಟ್ಟಣದ
ಮೇಲೆ ಹಾರುತ್ತಾ ಹೋದಳು.



ಬಾಗಿಲು ತೆರಿಯಿತು. ಸೇವಕಿ ಗುಲಾಬಿ
ಬಣ್ಣದ ರೇಷ್ಮೆ ಬಟ್ಟೆಯೊಡನೆ ಬಂದಳು.



ಮಗು ನಾನು ಕೆಲಸದ ಒತ್ತಡದಲ್ಲಿದ್ದೆ
ನನಗೆ ಆಯಾಸವಾಗಿದೆ.



ರಾಣಿ! ರಾಣಿ! ಎಲ್ಲಿದ್ದೀಯಾ ?



ತಾರಾ ಮರಳಿ ಮನೆಗೆ ಬಂದಳು. ತಾರನಷ್ಟು
ಸಂತಸವಾದ ಹುಡುಗಿ ಬೇರಾರು ಇರಲು
ಸಾಧ್ಯವಿಲ್ಲವೆನ್ನುವಷ್ಟು ಸಂತಸವಾಗಿದ್ದಳು.